

# The entertainer extraordinary



ECTV WINS THE TOSS AS THE CHOICEST TV

**ECTV-INDIA'S MOST TESTED/ TRUSTED/ TROUBLE-FREE TV**





ECTV AND YOU– AN OPENING PARTNERSHIP THAT LASTS FOR YEARS!

**ECTV-INDIA'S MOST TESTED/ TRUSTED/ TROUBLE-FREE TV**





NO SLIPS WHATSOEVER IN THE QUALITY CONTROL FIELDING!

**ECTV-INDIA'S MOST TESTED/ TRUSTED/ TROUBLE-FREE TV**





A MATCH WINNER ON ANY TEST PITCH

**ECTV-INDIA'S MOST TESTED/ TRUSTED/ TROUBLE-FREE TV**







AN UNBROKEN PARTNERSHIP OF SUPERB SOUND AND VISION

**ECTV-INDIA'S MOST TESTED/ TRUSTED/ TROUBLE-FREE TV**



ASP/ECIL/ 50/A

**Electronics Corporation of India Limited**
**Hyderabad-500 762**



# ಚಂದಮಾಮ

## ಫೆಬ್ರವರಿ 1982

★

## ಈ ಸಂಚಿಕೆಯಲ್ಲಿ



★

ಬಿಡಿ ಪ್ರತಿ ರೂ. ೧-೭೫

ವಾರ್ಷಿಕ ಚಂದಾ ರೂ. ೨೧.೦೦

# ಚಂದಮಾಮ


ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


ಮಾನವರೊಳಗೆ ವಿಶೇಷ ಶಕ್ತಿಯೋ ಪ್ರತಿಭೆಯೋ ಉಳ್ಳವರು ಅಲ್ಲಲ್ಲಿ ಅಪೂರ್ವವಾಗಿರುತ್ತಾರೆ. ಅವರನ್ನು ಎಲ್ಲದರಲ್ಲಿಯೂ ಗಟ್ಟಿಗರೆಂದು ಹೇಳುವಂತಿಲ್ಲ. ಹೆಚ್ಚಾಗಿ ಅಂತಹವರಿಗೆ ಲೋಕ ವ್ಯವಹಾರಗಳ ಒಳಿತು ಕೆಡುಕುಗಳ ಗೊಡವೆ ಇರುವುದಿಲ್ಲ. ಆದುದರಿಂದ ಅವರನ್ನು ಧೂರ್ತರು ತಮ್ಮ ಹಿತಕ್ಕೂ, ಉದಾರಿಗಳು ಸತ್ಕಾರ್ಯಗಳಿಗೂ ಉಪಯೋಗಿಸಿಕೊಳ್ಳಬಹುದು. ಅಂತಹ ವಿಶೇಷ ಶಕ್ತಿಯುಳ್ಳ ಸಾಧುವಾದವನೊಬ್ಬನನ್ನು ಈ ಸಂಚಿಕೆಯ "ಅಪೂರ್ವ ದೃಷ್ಟಿ" ಎಂಬೊಂದು ಕಥೆಯಲ್ಲಿ ಸಂಧಿಸುವಿರಿ.

## ಅಮರವಾಣಿ

**ಉದಾರಸ್ಯ ತೃಣಂ ವಿತ್ತಂ ಶೂರಸ್ಯ ಮರಣಂ ತೃಣಮ್**
**ವಿರಕ್ತಸ್ಯ ತೃಣಂ ಭಾರ್ಯಾ ನಿಸ್ಪೃಹಸ್ಯ ತೃಣಂ ಜಗತ್**

ದಾನ ಗುಣವುಳ್ಳವನಿಗೆ ಧನವೂ, ಶೂರನಾದವನಿಗೆ ಮರಣವೂ, ವೈರಾಗ್ಯ ತಾಳಿದವನಿಗೆ ಹೆಂಡತಿಯೂ, ಯಾವ ಇಚ್ಛೆಯೂ ಇಲ್ಲದವನಿಗೆ ಜಗತ್ತೂ ಹುಲ್ಲಿಗೆ ಸಮವಾಗಿರುತ್ತದೆ.


ಸಂಪುಟ : ೩೮ ಫೆಬ್ರುವರಿ '೮೭ ಸಂಚಿಕೆ : ೨

**ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦**






# ಚಂದ್ರಹಾರ

ಕನಕಪುರವೆಂಬ ಊರಿನಲ್ಲಿ ಚಂದ್ರನಾಥನೆಂಬ ಯುವಕನಿದ್ದನು. ಒಂದುದಿನ ರಾತ್ರಿ ಊರವರೆಲ್ಲಾ ನಿದ್ರಿಸಿಯಾಗಿತ್ತು. ಚಂದ್ರನಾಥನಿಗೂ ನಿದ್ದೆ ಹಿಡಿದಿತ್ತು. ಯಾರೋ ದಡದಡನೆ ಬಾಗಿಲು ತಟ್ಟುವ ಶಬ್ದ ಕೇಳಿ ಚಂದ್ರನಾಥನಿಗೆ ಎಚ್ಚರವಾಗಿ ಮೆಟ್ಟಿಬಿದ್ದೆದ್ದು ಬಾಗಿಲು ತೆರೆಯಲು ಹೊರಟನು. ಹೊರಗೆ ಮಳೆ ಬರುವ ಲಕ್ಷಣದೊಂದಿಗೆ ಮಿಂಚು ಹೊಳೆಯುತ್ತಿತ್ತು. ಗಾಳಿ ಬೀಸುತ್ತಿತ್ತು. ಇಂತಹ ಸಮಯದಲ್ಲಿ ಹೀಗೆ ಬಾಗಿಲು ಬಡೆಯುವವರು ಯಾರಾಗಿರಬಹುದು?

ಚಂದ್ರನಾಥನು ಬಾಗಿಲು ತೆರೆದ ಕೂಡಲೇ ಒಬ್ಬಳು ಹೆಂಗುಸು ಅವಸರವಸರವಾಗಿ ಒಳಗೆ ಬಂದು, "ಬಾಗಿಲು ಮುಚ್ಚಿ ತಾಳ ಹಾಕಿ ಬಿಡಿ. ದುಷ್ಟರು ಈ ಕಡೆಗೇ ಬರುತ್ತಿದ್ದಾರೆ! ಕೇಳಿದರೆ ಇಲ್ಲಿಗೆ ಯಾರೂ ಬರಲಿಲ್ಲ ಎನ್ನಿರಪ್ಪಾ!" ಎಂದಳು ಹೆದರುವ ದನಿಯಲ್ಲಿ. ಅವಳು ಬೆಲೆಬಾಳುವ ಪಟ್ಟೆಯ ಶೀರೆ ಉಟ್ಟುಕೊಂಡಿದ್ದಳು. ಶರೀರದಲ್ಲಿ ತುಂಬಾ ನಗಗಳಿದ್ದುವು. ಆ ಶ್ರೀಮಂತ ಹೆಂಗುಸಿನ ಸ್ವರದಲ್ಲಿ ತುಂಬಾ ಭಯದ ಛಾಯೆಯೂ ಇತ್ತು. ಚಂದ್ರನಾಥನು ಬಾಗಿಲನ್ನು ಮುಚ್ಚಿದ ಕೂಡಲೇ ಮೂವರು ಮನುಷ್ಯರು ಮನೆಯ ಮುಂದಿನಿಂದಾಗಿ ಓಡುತ್ತಾ ಮುಂದೆ ಹೋದುದನ್ನು ನೋಡಿದನು.

"ಯಾರಮ್ಮಾ ನೀವು? ಈ ಸಮಯದಲ್ಲಿ ಎತ್ತ ಹೊರಟಿದ್ದೀರಿ? ಅವರೇಕೆ ನಿಮ್ಮ ಬೆನ್ನು ಹಿಡಿದು ಹಾಗೆ ಓಡುತ್ತಾರೆ?" ಎಂದು ಚಂದ್ರನಾಥ ಆ ಹೆಂಗುಸನ್ನು ಕೇಳಿದನು.

ಆ ಸಮಯಕ್ಕೆ ಆ ಮಹಿಳೆ ಮನೆಯೊಳಗೆ ಬಂದು ನೆಮ್ಮದಿಗೊಂಡಂತೆ ಉಸಿರುಬಿಟ್ಟು, ಆಯಾಸ ಪರಿಹರಿಸಿ ಕೊಳ್ಳಲು ಕುಳಿತು, "ನನ್ನ ನಗ ನಟ್ಟುಗಳಿಗೋಸ್ಕರ ಬೆನ್ನು ಹತ್ತಿ ಬಂದರಪ್ಪಾ. ನಮ್ಮ ಬಂಧುಗಳೊಬ್ಬರ ಮನೆಗೆ ಹೋಗಿದ್ದೆ. ನನಗೆ ಹೊಟ್ಟೇ ನೋವಿನ ಕಾಟವಿದೆ. ಮದ್ದು ಮನೆಯಲ್ಲೇ ಬಿಟ್ಟಿದ್ದೆ. ಆ ನೋವು ಜೋರಾಗುವುದೋ ಎಂದು ಹೆದರಿ ಬಾಡಿಗೆಗೆ ಗಾಡಿ ಮಾಡಿಕೊಂಡು ಮನೆಗೆ ಹೊರಟೆನಪ್ಪಾ, ದಾರಿಯಲ್ಲಿ ಇಬ್ಬರು ಗಾಡಿಯನ್ನು ಅಟಕಾಯಿಸಿದರು. ಗಾಡಿಯವನು ಕೂಡಾ ಅವರ ಜತೆಯವನೇ ಅಂತ ಆಮೇಲೆ ಗೊತ್ತಾಯಿತು. ಅದೃಷ್ಟವಶಾತ್ ನಾನು ಅವರ ಕಣ್ಣು ತಪ್ಪಿಸಿ ಓಡಿಬಂದೆ" ಎಂದಳು.

ಎಂ. ಕೆ. ಈಶ್ವರರಾವ್



ಆ ಸಮಯದಲ್ಲಿ ಹೊರಗೆ ಭಾರಿ ಮಳೆ ಪ್ರಾರಂಭವಾಯಿತು. ಚಂದ್ರಕಾಂತನು ಆವಳೊಂದಿಗೆ, "ಈ ಮಳೆಯಲ್ಲಿ ಇನ್ನು ಹೇಗೆ ಹೋಗುವಿರಿ? ಬೇರೆ ಗಾಡಿಸಿಗುವುದು ಕಷ್ಟ. ಬೆಳಗಾದಮೇಲೆ ಹೋಗುವುದು ಒಳ್ಳೇದು. ಹೊಟ್ಟೇ ನೋವು ಜೋರಾಗಿಲ್ಲವಷ್ಟೆ?" ಎಂದನು.

"ಹಾಗೇನಿಲ್ಲಪ್ಪ. ಎಲ್ಲಿ ಜೋರಾಗುತ್ತೋ ಅಂತ ಹೆದರಿ ಅವಸರಪಟ್ಟು ಹೊರಟದ್ದೇ ತಪ್ಪಾಯಿತು. ಭಯದಲ್ಲಿ ಸ್ವಲ್ಪ ಸ್ವಲ್ಪ ಇದ್ದ ಹೊಟ್ಟೇ ನೋವು ಅಡಗಿಯೇ ಹೋಯಿತು ಸದ್ಯ!" ಎಂದಳು ಆಕೆ.

ಚಂದ್ರಕಾಂತನು ಆವಳಿಗಾಗಿ ನಡುಕೋಣೆಯಲ್ಲಿ ಮಂಚವನ್ನು ಹಾಕಿ ಹಾಸಿಗೆ ಹಾಸಿಕೊಟ್ಟನು. ಆವಳು ಅವನಿಗೆ ಕೃತಜ್ಞತೆ ಹೇಳಿ ಆ ಕೋಣೆಯೊಳಗೆ ಹೊಕ್ಕುಬಾಗಿಲು ಹಾಕಿಕೊಂಡಳು.

ಚಂದ್ರಕಾಂತನಿಗೆ ಬಹಳ ಹೊತ್ತಿನ ವರೆಗೂ ನಿದ್ದೆ ಬರಲಿಲ್ಲ. ಆಮೇಲೆ ನಿದ್ದೆ ಹಿಡಿದು ಎಚ್ಚರವಾದಾಗ ಮಾರುದ್ದ ಹೊತ್ತೇರಿತು. ಅವನು ಕೋಣೆಯಿಂದ ಹೊರಗೆಬಂದನು. ಹೊರಬಾಗಿಲು ಮುಚ್ಚಿದರೂ ಒಳಗೆ ತಾಳ ಹಾಕದಿರುವುದನ್ನು ನೋಡಿ, ತಾನೇ ಮರೆತಿರ ಬೇಕೆಂದು ಭಾವಿಸಿದನು. ಹಿಂದಿರುಗಿ ನೋಡಿದಾಗ ನಡುಗೋಣೆಯ ಬಾಗಿಲೂ ತೆರೆದಿತ್ತು. ಮಂಚದಲ್ಲಿ ಆ ಹೆಂಗುಸು ಕಾಣಲಿಲ್ಲ. ಹೊರಗೂ ಇರಲಿಲ್ಲ. ಮಂಚದ ಪಕ್ಕದ ಮೇಜಿಯ ಮೇಲೆ ಒಂದು ಚಂದ್ರಹಾರವಿರುವುದನ್ನು ನೋಡಿದನು, ಅವನು ಚಕಿತನಾಗಿ ಆ ಹಾರವನ್ನು ತೆಗೆದು ನೋಡಿದರೆ, ಅದು ಕಡಿಮೆಯೆಂದರೆ, ನಾಲ್ಕು ಸಾವಿರ ರೂಪಾಯಿ ಬೆಲೆಬಾಳುವುದಾಗಿ ತೋರಿತು. ಅವನ ಮನಸ್ಸಿನಲ್ಲಿ ಏನೇನೋ ಆಲೋಚನೆಗಳು ಹಾಯ್ದು ಬರತೊಡಗಿದುವು.

ಆ ಹೆಂಗುಸು ಮಲಗುವ ಮೊದಲು ಈ ಹಾರವನ್ನು ತೆಗೆದು ಮೇಜಿಯ ಮೇಲಿಟ್ಟಿರಬಹುದು. ಹೊಟ್ಟೇನೋವು ಮರು ಕಳಿಸಿಕೊಂಡ ಅವಸರದಲ್ಲಿ ಮರೆತು ಎದ್ದು ಹೋಗಿರಬಹುದು. ಅಥವಾ ಬೆಳಗಾದ ಮೇಲೆ ತಾನು ಯಾವನ ಮನೆಯಲ್ಲೋ ಮಲಗಿದ ಸಂಗತಿ ಬಹಿರಂಗವಾಗುವುದು ಚೆನ್ನಾಗಿರದೆಂದು ಆ ಶ್ರೀಮಂತ ಮಹಿಳೆ ಭಾವಿಸಿ ಪತ್ತೆ ಕೊಡದೆ ಹೋದಳೋ ಏನೋ! ಆ ಅವಸರದಲ್ಲಿ ಇದನ್ನು ಮರೆತಿರಬೇಕು.

ಹೀಗೆ ಯೋಚಿಸುತ್ತಿದ್ದ ಚಂದ್ರಕಾಂತನಿಗೆ, ಆ ಚಂದ್ರಹಾರವನ್ನು ನೋಡಿ, ಮದುವೆಯಾದಾಗಿನಿಂದಲೂ ಅವನ ಹೆಂಡತಿ ಕೇಳುತ್ತಾ ಇದ್ದ ಚಂದ್ರಹಾರದ ನೆನಪು ಬಂದಿತು. ಆವಳು ಹಟ ಹಿಡಿದು ಕೇಳುವ ಚಂದ್ರಹಾರ ಮಾಡಿಸಲು ಅವನಿಂದಂತೂ ಸಾಧ್ಯವಿರಲಿಲ್ಲ.

ನಿನ್ನೆಯದಿನ ಅವನು ಕಾರ್ಯಾಲಯದಿಂದ ಮನೆಗೆ ಬರುವಾಗ ಮನೆಯಲ್ಲಿ ಅವನ ಹೆಂಡತಿ ಭಾಗ್ಯಳು ಒಂದು ಕಾಗದವನ್ನು ಮಂಚದಲ್ಲಿಟ್ಟು, ತೌರು ಮನೆಗೆ



ಹೊರಟು ಹೋಗಿದ್ದಳು. ಆ ಕಾಗದದಲ್ಲಿ "ನನ್ನ ಮಾತಿಗೆ ನೀವು ಬೆಲೆ ಕೊಡುವುದೇ ಇಲ್ಲ. ಈ ಸಾರಿ ದೀಪಾವಳಿಗೆ ಚಂದ್ರಹಾರ ಮಾಡಿಸದಿದ್ದರೆ ನಾನು ಇಲ್ಲಿಗೆ ಬರಲಾರೆ" ಎಂದು ಬರೆದಿದ್ದಳು. ಈ ಚಂದ್ರಹಾರ ನೋಡುವಾಗ ಅದೇಕೆ ನೆನಪಾಗಬೇಕು?

ಈಗ ಈ ಚಂದ್ರಹಾರ ಅವನ ಕೈಗೆ ಸಿಕ್ಕಿದೆ. ಅವನು ಅದನ್ನು ಹಿಡಿದುಕೊಂಡು ಯೋಚಿಸುತ್ತಿದ್ದಾಗ ಮನೆಯ ಹತ್ತಿರ ಅವನ ಹೆಂಡತಿ ನೆರೆ ಮನೆಯವರೊಂದಿಗೆ ಮಾತಾಡುವ ಶಬ್ದ ಕೇಳಿತು. ಯಾವ ಕಾರಣದಿಂದಲೋ ಭಾಗ್ಯಳು ತೌರು ಮನೆಯಿಂದ ಆಗಲೇ ಹಿಂದಿರುಗಿ ಬಂದಿದ್ದಳು. ಈ ಚಂದ್ರಹಾರವನ್ನು ಅವಳು ನೋಡಿಬಿಟ್ಟರೆ ತನಗಾಗಿ ಮಾಡಿಸಿದ್ದೆಂದು ಕೊಳ್ಳುತ್ತಾಳೆ. ನಿಜ ಹೇಳಿದರೂ ನಂಬಲಾರಳು. ಇದನ್ನು ಹೇಗಾದರೂ ರಾತ್ರಿ ಬಂದ ಮಹಿಳೆಗೆ ಕೊಟ್ಟುಬಿಡಬೇಕಾದುದೇ ಧರ್ಮ. ಆಕೆ ಮರೆತೆನೆಂದು ಕೇಳಲಿಕ್ಕೆ ಬಂದರೂ ಬರಬಹುದು. ಇದನ್ನು ಫಕ್ಕನೆ ಅಡಗಿಸಬೇಕಾದ್ದೇ ಮುಖ್ಯ. ಚಂದ್ರಕಾಂತನು ಅಡಿಗೇ ಮನೆಗೆ ಹೋಗಿ ಆ ಹಾರವನ್ನು ಇದ್ದಿಲಿ ಚೀಲದೊಳಗೆ ಹಾಕಿ, ಅದು ಅಡಿಗೆ ಹೋಗುವ ಹಾಗೆ ಗೋಣೀ ಚೀಲವನ್ನು ಅಲುಗಾಡಿಸಿಟ್ಟನು. ಸದ್ಯ ಅದು ಹೆಂಡತಿಯ ಕಣ್ಣಿಗೆ ಬೀಳುವ ಸಾಧ್ಯತೆ ಇಲ್ಲ.

ಭಾಗ್ಯಳು ಒಳಗೆ ಬರುತ್ತ, "ನನ್ನ ಕಾಗದ ನೋಡಿದಿರಾ? ಖಂಡಿತಾ ಚಂದ್ರಹಾರ ಮಾಡಿಸ್ತೀರಿ ತಾನೇ? ನಿಮ್ಮ ವಿಷಯ ಗೊತ್ತಿಲ್ಲವೇ? ಮನಸ್ಸು ಮಾಡಿದರೆ ನನಗಾಗಿ ನೀವು ಏನಾದರೂ ಮಾಡದಿರಲಿಕ್ಕಿಲ್ಲ. ಅದಕ್ಕೇ ಬಂದೆ" ಎಂದು ಏನೋ ರಂಗಿನ ಮಾತಾಡಿದಳು. ಅವಳ ತೌರು ಮನೆಯಲ್ಲಿ ಅತ್ತಿಗೆಯೊಂದಿಗೆ ಜಗಳಾಡಿ, ಬೆಳಿಗ್ಗೆ ಬೇಗನೆದ್ದು ಬಂದಿರಬೇಕೆಂದು ಚಂದ್ರಕಾಂತನು ಅಂದುಕೊಂಡನು.

ಅವನು ಕಾರ್ಯಾಲಯಕ್ಕೆ ಹೋದ ಮೇಲೆ ಭಾಗ್ಯಳು ಅಡಿಗೆ ಮನೆಯಲ್ಲಿ ಗುಡಿಸುವಾಗ ಚಿಕ್ಕದೊಂದು ಚೇಳು ಇದ್ದಿಲಿ ಚೀಲದೊಳಗೆ ಹೊಕ್ಕುದನ್ನು ನೋಡಿದಳು. ಕೂಡಲೇ ಅವಳು ಆ ಚೀಲವನ್ನು ಕೌಚಿ ಹಾಕಿ ಸಿಕ್ಕಿದ ಚೇಳನ್ನು ಕೋಲಿನಿಂದ ಹೊಡೆದುಕೊಂದಳು.

ಆಮೇಲೆ ಮತ್ತೆ ಇದ್ದಿಲಿಯನ್ನು ಚೀಲದೊಳಗೆ ತುಂಬಿಸುತ್ತಾ ಇರುವಾಗ, ಚಂದ್ರಹಾರವು ಅವಳ ಕಣ್ಣಿಗೆ ಜಗ್ಗನೆ ಹೊಳೆಯಿತು! ಅದನ್ನು ಅತ್ಯಾನಂದಾಶ್ಚರ್ಯಗಳಿಂದ ತೆಗೆದು ಒರೆಸಿ ನೋಡಿದಳು! ಅದನ್ನು ತನ್ನ ಕೊರಳಿಗೆ ಅಲಂಕರಿಸಿಕೊಂಡು ನೋಡುತ್ತ ತನಗೆ ತಾನೇ ಉಬ್ಬಿಕೊಂಡಳು. ಎಂತಹ ಅದೃಷ್ಟ ತನದು!

ಇದ್ದಿಲಿ ಅಂಗಡಿಯಲ್ಲಿ ಹೇಗೋ ಸೇರಿದ ಚಂದ್ರಹಾರವು ಚೀಲದೊಳಗೆ ಹೊಕ್ಕು ತನ್ನ ಮನೆಗೆ ಬಂದಿದೆಯೆಂದು ಅವಳಿಗೆ ತೋರಿತು. ಇದನ್ನು ಗಂಡನಿಗೆ ಹೇಳಿದರೆ ಎಂದಿಗೂ ಹೊಸ ಚಂದ್ರಹಾರ

ಮಾಡಿಸಲಾರರು. ಇದು ನಿಜವಾದ ಚಿನ್ನವೋ ಅಲ್ಲವೋ ತಿಳಿಯುವವರೆಗೆ ಗಂಡನ ಕಣ್ಣಿಗೆ ಬೀಳಿಸ ಬಾರದು. ಇವರು ಚಂದ್ರಹಾರಕ್ಕೆ ಸ್ವಲ್ಪ ಹಣ ಸೇರಿಸಿದ್ದಾರೆ. ಹಾಗೆ ಚಂದ್ರಹಾರ ಬಂದರೆ, ಇದನ್ನು ಅಳಿಸಿ ಬಳೆ ಮಾಡಿಸಿಕೊಂಡರಾಯಿತು. ಎಷ್ಟಿದ್ದರೂ ನಗಗಳು ಕಪಿಯಾಗುವುದಿಲ್ಲವಷ್ಟೆ ?

ಗಂಡನು ಮನೆಯಲ್ಲಿರುವುದಕ್ಕೆಲ್ಲಾ ಕೈಹಾಕುತ್ತಾನೆ. ಅಂತಲೇ ಅವಳು ಆ ಚಂದ್ರಹಾರವನ್ನು ಒಂದು ಡಬ್ಬಿಯೊಳಗೆ ಹಾಕಿ ಅದರಮೇಲೆ ತಾನು ತೌರು ಮನೆಯಿಂದ ತಂದ ತಂಬಿಟ್ಟುಂಡೆಗಳನ್ನು ತುಂಬಿಸಿ, ನೆರೆ ಮನೆಗೆ ಹೋದಳು. ಅವಳು ತೌರು ಮನೆ ಯಿಂದ ಬೆಳಂಜಾವದಲ್ಲಿ ಹೊರಟು ಬರುವಾಗ ಅವಳ ಜತೆಯಲ್ಲಿ ಆ ನೆರೆ ಮನೆಯ ಸಂಬಂಧಿಕ ಹುಡುಗನೊಬ್ಬ ಬಂದು, ಈ ದಿನ ಅವನು ಹಿಂದಿರು ಗುತ್ತಾನೆ. ಭಾಗ್ಯಳು ಡಬ್ಬವನ್ನು ಅವನ ಹತ್ತಿರ ಕೊಟ್ಟು, ಅದನ್ನೊಯ್ದು ತನ್ನ ತಾಯಿಯ ಹತ್ತಿರ ಕೊಡಲು ಹೇಳಿದಳು.

ಆ ಹುಡುಗ ಸಾಯಂಕಾಲದಲ್ಲಿ ಅಲ್ಲಿಗೆ ಹೋಗಿ ಆ ಉಂಡೆಗಳ ಡಬ್ಬವನ್ನು ಭಾಗ್ಯಳ ತೌರು ಮನೆಗೆ ಒಯ್ದನು. ಅಲ್ಲಿ ಭಾಗ್ಯಳ ತಾಯಿ ಇಲ್ಲದ್ದರಿಂದ, ಅತ್ತಿಗೆಯೇ ತೆಗೆದುಕೊಂಡಳು. ಅವಳು ಡಬ್ಬ ದೊಳಗಿನ ಉಂಡೆಗಳನ್ನು ನೋಡಿ, ತನ್ನ ಹತ್ತಿರ ಜಗಳವಾಡಿ ಹೋದವಳು ಅಮ್ಮ ಕೊಟ್ಟ ಉಂಡೆ ಗಳನ್ನೂ ವಾಪಸು ಮಾಡಿದಳೇಕೋ ಎಂದುಕೊಂಡು ಕುತೂಹಲ ಪಡುತ್ತ, ಡಬ್ಬವನ್ನು ಕೌಚಿ ಹಾಕಿದಳು. ಚಂದ್ರಹಾರ ಅವಳಿಗೆ ಸಿಕ್ಕಿತು.

"ಈ ಅತ್ತೆಯೂ ಮಗಳೂ ದೇವಾಂತಕಿಯರೇ ಸರಿ! ಅತ್ತೆ ಮನೆಯ ಸೊತ್ತು ಅಮ್ಮನ ಮನೆಗೆ ಸೇರಿಸುತ್ತಾಳೋ ! ನಿಜಕ್ಕೂ ದೊಡ್ಡ ಕಳ್ಳಿಯೇ ಸರಿ! ತಕ್ಕ ಶಾಸ್ತಿ ಮಾಡಲೇಬೇಕು !" ಎಂದುಕೊಂಡು ಅವಳು ಆ ಹಾರವನ್ನು ತನ್ನ ಗಂಡ ನರಹರಿಯ



ಕೈಗೆ ಕೊಟ್ಟು, "ಎಲ್ಲಿಂದ, ಏನು ಏಕೆ ಅಂತ ಏನೂ ಕೇಳಬೇಡಿ. ಇದನ್ನು ಕರಗಿಸಿ ಹೊಸ ನಗ ಮಾಡಿಸಿ ತನ್ನಿ !" ಎಂದಳು.

ನರಹರಿಗೆ ಹೆಂಡತಿಯ ಮಾತು ಸುಗ್ರೀವಾಜ್ಞೆ. ಅವನು ನಗರಕ್ಕೆ ಹೋಗಿ, ದೊಡ್ಡದೊಂದು ನಗಗಳ ಅಂಗಡಿಯಲ್ಲಿ, ಅದನ್ನು ಹೊಸ ಹಾರ ಮಾಡಲು ಹೇಳಿದನು. ಅಂಗಡಿಯವನು ಏನೋ ಸಂದೇಹ ಪಟ್ಟು, ಬೇರೆಬೇರೆ ಹಾರಗಳ ವಿನ್ಯಾಸಗಳನ್ನು ಅವನಿಗೆ ಕೊಟ್ಟು, ನರಹರಿ ಅದನ್ನು ನೋಡುತ್ತಿರು ವಾಗ, ರಹಸ್ಯವಾಗಿ ಸೇವಕನನ್ನು ಓಡಿಸಿ ರಕ್ಷಕ ಭಟರನ್ನು ಕರೆಯಿಸಿದನು. ಒಳ್ಳೆಯ ಹಾರವನ್ನು ಅಳಿಸಲು ಹೇಳಿದುದರ ಪರಿಣಾಮವದು.

ಭಟರು ಚಂದ್ರಹಾರದೊಂದಿಗೆ ಅವನನ್ನು ಕೋತ್ವಾಲ ಕಚೇರಿಗೆ ಒಯ್ದರು. ವಿಚಾರಿಸಿದಾಗ, ಅವನ ಹೆಂಡತಿಯನ್ನೇ ಕೇಳ ಬೇಕೆಂದಾಯಿತು. ಅವಳಿಂದ ಅದು ಉಂಡೆಗಳ ಡಬ್ಬದಲ್ಲಿ

ನರಹರಿಯ ತಂಗಿ ಕಳುಹಿಸಿದ್ದೆಂದು ಗೊತ್ತಾಯಿತು. ರಕ್ಷಕಭಟರು ಅವರಿಬ್ಬರನ್ನೂ ಕರೆದುಕೊಂಡು ಭಾಗ್ಯಳ ಮನೆಗೆ ಬಂದರು. ಅವಳು ಹೆದರಿ ನಡುಗಿ ಅದು ತನಗೆ ಇದ್ದಿಲಿ ಮೂಟೆಯಲ್ಲಿ ಸಿಕ್ಕಿತೆಂದಳು. ಆಗ ಚಂದ್ರಕಾಂತನು ನಡೆದ ಸಂಗತಿಯನ್ನೆಲ್ಲಾ ರಕ್ಷಕಭಟರೊಂದಿಗೆ ಹೇಳಿ, "ಇದನ್ನು ಇಲ್ಲಿ ಬಿಟ್ಟು ಹೋದ ಆ ಶ್ರೀಮಂತ ಹೆಂಗುಸು ಯಾರೋ ಗೊತ್ತಿಲ್ಲ!" ಎಂದನು.

ಇನ್ನೇನು ಮಾಡುವುದೆಂದು ರಕ್ಷಕಭಟರು ಆಲೋಚಿಸುವಾಗ ಆ ಮನೆಯ ಮುಂದೆ ಒಂದು ಕುದುರೇ ಗಾಡಿ ಬಂದು ನಿಂತಿತು. ಅದರಿಂದ ಚಂದ್ರಹಾರದ ಒಡತಿ ಇಳಿದು ಬಂದು, ಅಲ್ಲಿ ನಡೆದುದನ್ನು ನೋಡಿ ಆಶ್ಚರ್ಯಪಟ್ಟು, "ಚಂದ್ರ ಹಾರವನ್ನು ಯಾರೂ ಕದಿಯಲಿಲ್ಲ. ಇವರ ಮನೆಯಲ್ಲಿ ಹೊಟ್ಟೆ ನೋವಿನ ಬಾಧೆಯಿಂದ ಮರೆತು ಇಲ್ಲಿ ಬಿಟ್ಟು ಹೋದೆನು. ಇನ್ನೇನೂ ಗಲಾಟೆ ಮಾಡಿ ತೊಂದರೆ ಕೊಡಬೇಡೀಪ್ಪಾ" ಎಂದಳು.

ರಕ್ಷಕಭಟರು ಹೊರಟುಹೋದ ಮೇಲೆ ಆ ಮಹಿಳೆ ಹೀಗೆಂದಳು :

"ಆ ರಾತ್ರಿ ನಾನು ಮಲಗಿದ ಮಂಚದ ಹತ್ತಿರ ವಿದ್ದ ಮೇಜೀ ಮೇಲೆ ನಿಮ್ಮ ಹೆಂಡತಿ ಬರೆದಿಟ್ಟು ಹೋದ ಕಾಗದ ನನ್ನ ಕಣ್ಣಿಗೆ ಬಿತ್ತು. ಏನೆಂದು ಓದಿದೆ. ಅವಳು ಹುಚ್ಚು ಆಶೆಯ ಹಟದಿಂದ ತೌರಿಗೆ ಹೋದ ಸಂಗತಿ ಗೊತ್ತಾಯಿತು. ನನ್ನ ಯಜಮಾನರು ಕೋಟೀಶ್ವರರು. ಇಂತಹ ಹಾರ ನಮಗೊಂದು ಲೆಕ್ಕವಲ್ಲ. ನಿಮ್ಮ ವಳಿಗಾಗಿಯೇ ತೆಗಿದಿಟ್ಟೆ, ಆಮೇಲೆ ಹೊಟ್ಟೇ ನೋವು ಎದ್ದು, ನಿದ್ದೆ ಬರಲಿಲ್ಲ. ನಾನು ಆಪತ್ತಿನಲ್ಲಿ ಸಿಕ್ಕಿ ಇಲ್ಲಿ ಆಶ್ರಯ ಪಡೆದದ್ದು ನಾಲ್ಕು ಮಂದಿಗೆ ಗೊತ್ತಾಗ ಬಾರದೂ ಅಂತ ಬೇಗನೇ ಎದ್ದು ಹೋಗಿ ಬಾಡಿಗೆ ಗಾಡಿ ಹಿಡಿದು ಮನೆ ಸೇರಿ, ಮದ್ದು ನುಂಗಿದೆ. ಇವತ್ತು ನಿಧಾನವಾಗಿ ನಿಮಗೆ ಹೇಳೋಣ ವೆಂತಲೇ ಬಂದೆನು" ಎಂದು ಹೇಳಿ ಭಾಗ್ಯಳನ್ನು ನೋಡಿ, "ನೀನು ತಾನೇ ಆ ಚೀಟಿ ಬರೆದವಳು? ಗಂಡನ ಶಕ್ತಿ ತಿಳಿದು ನಡೆದುಕೋ ಅಮ್ಮಾ. ಹಾಗೆಲ್ಲಾ ಒತ್ತಾಯಿಸಬಾರದು. ಇದು ನಿನಗೇ ನಾನು ಕೊಡುವ ಕಾಣಿಕೆ. ಧಾರಾಳವಾಗಿ ಹಾಕ್ಕೋ! ಗಂಡ ಹೆಂಡಿರು ಚೆಂದಾಗಿರಿ!" ಎಂದಳು.

ಭಾಗ್ಯಳು ನಾಚಿ ತಲೆ ತಗ್ಗಿಸಿ, "ನಿಮ್ಮ ಆ ಒಂದು ನೀತಿ ಮಾತೇ ನನ್ನ ಚಂದ್ರಹಾರವಾಯಿತು. ನನ್ನವರೇ ನನ್ನ ಬೆಲೆಯಿಲ್ಲದ ಚಂದ್ರಹಾರ!" ಎಂದು ಹಿಂಜರಿದು, ಚಂದ್ರಹಾರವನ್ನು ತೆಗೆದು ಕೊಳ್ಳದೆ, ಒಳಗಿನಿಂದ ಕುಂಕುಮದ ಕರಡಿಗೆತಂದು ಆ ಮಹಿಳೆಯ ಮುಂದೆ ಹಿಡಿದಳು.






## ೩

[ನಿರಾಯುಧನಾದ ಮಂದರದೇವನನ್ನು ಬಂಧಿಸಿ ಸಮುದ್ರ ತೀರದ ಕಡೆಗೆ ಒಯ್ಯುತ್ತಿದ್ದ ದ್ರೋಹಿಗಳಿಬ್ಬರೂ ಫಕ್ಕನೆ ಸಿಡಿಲು ಬಡೆದು ಮಡಿದರು. ಅನಂತರ ಮಂದರದೇವನನ್ನೂ ಅವನ ಸೈನಿಕರನ್ನೂ ಕುಂಡಲಿನೀ ಆಶ್ವಿಕ ಸೈನಿಕರು ಮುತ್ತಿದರು. ಆಗ ನಡೆದ ಹೋರಾಟದಲ್ಲಿ ಕೆಲವು ಆಶ್ವಿಕರು ಸಾಯಲು, ಉಳಿದವರು ಕೋಟೆಯ ಕಡೆಗೆ ಓಡಿದರು. ಮಂದರದೇವನು ಜತೆಗಾರರೊಂದಿಗೆ ದೋಣಿಗಳ ಕಡೆಗೆ ಹೋದನು.]

ಆ ದೋಣಿಗಳನ್ನು ನೋಡುತ್ತಾ, ಮಂದರದೇವನು ಒಮ್ಮೆಲೇ ಕೋಟೆಯ ಕಡೆಗೆ ನೋಡಿ ನಿಟ್ಟುಸಿರು ಬಿಟ್ಟು, ನಿರಾಶೆಯ ಧ್ವನಿ ತೆಗೆದುದನ್ನು ನೋಡಿ ರಕ್ಷಕ ಸೈನಿಕರು ಬೆರಗಾದರು. ಮಂದರದೇವನ ಮುಖ ಲಕ್ಷಣಗಳಿಂದ ಅವನೇನೋ ದೀರ್ಘಾಲೋಚನೆಯಲ್ಲಿರುವುದಾಗಿ ಅವರಿಗೆ ತೋರಿತು. ಮಂದರದೇವನು ಒಮ್ಮೆ ಸಮುದ್ರದ ಕಡೆಗೂ, ಮತ್ತೊಮ್ಮೆ ಕೋಟೆಯ ಕಡೆಗೂ ನೋಡುತ್ತ ನಿರಾಶೆಯ ನಿಟ್ಟುಸಿರು ಬಿಡುವುದನ್ನು ನೋಡಿ ಸೈನಿಕರಿಗೆ ಭಯವಾಯಿತು.

ತಮ್ಮ ರಾಜನನ್ನು ಕಳವಳ ಪಡಿಸುವಂತಹ ಹೊಸ ಸಂಗತಿ ಯಾವುದೆಂದು ತಿಳಿಯದೆ, ಅವರೂ ಸುಮ್ಮನೆ ನಿಂತಿರಲು, ಮಂದರದೇವನು ಅವರೆಲ್ಲರನ್ನೂ ನೋಡಿ ಹೀಗೆಂದನು:

"ನನ್ನ ಪ್ರಿಯರೇ, ನಾವೀಗ ಈ ರಾಜ್ಯವನ್ನು ಎಷ್ಟು ಬೇಗದಲ್ಲಿ ಬಿಟ್ಟು ಹೋದರೆ ಅಷ್ಟು ಕ್ಷೇಮವೆನ್ನಲು ಸಂದೇಹವಿಲ್ಲ. ನಮ್ಮ ಕೈಯಲ್ಲಿ ಪೆಟ್ಟು ತಿಂದು ಓಡಿಹೋದ ಆ ಕುದುರೇ ಸವಾರರು ನಮ್ಮ ಸಮಾಚಾರವನ್ನು ಅವರ ನಾಯಕನಿಗೆ ತಿಳಿಸೇ ತಿಳಿಸುತ್ತಾರೆ. ಆಮೇಲೆ ಅವರು ಎರಡು




ಪಾಲು ಹೆಚ್ಚಿನ ಬಲದೊಂದಿಗೆ ಬಂದು ನಮ್ಮನ್ನು ಮುತ್ತುತ್ತಾರೆ. ಆಗ ತಪ್ಪಿಸಿಕೊಳ್ಳಲು ನಮಗಾಗದು. ಅಂತಲೇ ನಾವು ಈ ಚಿಕ್ಕ ದೋಣಿಗಳಲ್ಲಿ ಮಹಾಸಮುದ್ರದ ಮೇಲೆ ಹೊರಟು ಯಾವ ಕಾಣದ ದ್ವೀಪಕ್ಕಾದರೂ ಹೋಗಲೇ ಬೇಕಾಗಿದೆ. ಪ್ರಯಾಣಕಾಲದಲ್ಲಿ ಯಾವ ಕ್ಷಣದಲ್ಲಿ ಏನು ಅಪಾಯ ತಲೇ ಮೇಲೆ ಬರುವುದೋ ಹೇಳುವಂತಿಲ್ಲ. ನನ್ನೊಂದಿಗೆ ನಿಜಕ್ಕೂ ನೀವು ನಾಲ್ವರೂ ಸಹ ಈ ದ್ವೀಪವನ್ನು ಬಿಟ್ಟು ಬರಬಲ್ಲಿರಾ ?"

ಕೂಡಲೇ ನಾಲ್ವರು ಸೈನಿಕರೂ ಒಗ್ಗೊರಲಿನಿಂದ, "ಮಹಾರಾಜರೇ ! ಇದೆಂಥ ಪ್ರಶ್ನೆ ಪ್ರಭೂ ! ನಾವು ಇಷ್ಟುಕಾಲದ ವರೆಗೆ ನಿಮ್ಮ ಆಶ್ರಯದಲ್ಲಿ ಬದುಕಿದವರು. ಕಷ್ಟಕಾಲದಲ್ಲಿ ನಿಮ್ಮನ್ನು ಬಿಟ್ಟು ಹೋಗುವಂಥ ವಿಶ್ವಾಸವಿಲ್ಲದವರು ನಾವಲ್ಲ ಪ್ರಭೂ !" ಎಂದರು. ತನ್ನ ಸೈನಿಕರ ರಾಜಭಕ್ತಿಯನ್ನು ನೋಡಿ ಮಂದರದೇವನ ಹೃದಯವು ದ್ರವಿಸಿತು. ಅವರನ್ನು ಮೆಚ್ಚಿಕೊಳ್ಳುತ್ತ, "ನಾನು ನಿಮ್ಮ ರಾಜಭಕ್ತಿಯನ್ನು ಸ್ವಲ್ಪವೂ ಶಂಕಿಸಿ ಮಾತಾಡಲಿಲ್ಲ. ನಾನೇನೋ ಈವರೆಗೂ ಅವಿವಾಹಿತನಾಗಿರುವವನು. ಯಾವ ಬಂಧನವೂ ಇಲ್ಲದವನು. ಯುದ್ಧ ಪ್ರಕಟನೆ ಮೊದಲಾದ ಯಾವುದೇ ರಾಜಧರ್ಮವನ್ನು ಪಾಲಿಸದೆ ಹಠಾತ್ತಾಗಿ ನಮ್ಮ ರಾಜ್ಯದ ಮೇಲೆ ದಾಳಿಮಾಡಿ ವಶಪಡಿಸಿಕೊಂಡನಲ್ಲಾ, ಆ ಧೂರ್ತ ನರವಾಹನ ಮಿಶ್ರ ! ಅವನನ್ನು ಎಂದಾದರೂ ಹಿಡಿದು ಹತಮಾಡುವುದೊಂದರ ಹೊರತು ಬೇರೆ ಜೀವಿತೋದ್ದೇಶ ನನಗಿಲ್ಲ, ಆದರೆ ನೀವು ಹೆಂಡತಿ ಮಕ್ಕಳು, ಬಂಧುಗಳು..." ಎನ್ನಲು ಸೈನಿಕರು "ಗೊತ್ತಾಯಿತು ಪ್ರಭೂ; ಅಂತಹ ಬಂಧನಗಳಾವುದೂ ನಮಗೇನಿಲ್ಲ ಮಹಾರಾಜರೇ." ಎಂದರು ನಾಲ್ವರೂ ಏಕಕಂಠದಿಂದ.

ಮಂದರದೇವನು ಸೈನಿಕರ ಕಡೆಗೆ ವಾತ್ಸಲ್ಯ ಸೂಸುವ ದೃಷ್ಟಿಯಿಂದ ನೋಡಿ, "ಈಗ ನನಗೆ ಸಮಾಧಾನವಾಯಿತು. ಹಾಗಾದರೆ ಸರಿ. ಇನ್ನು ನಾವು ತಡಮಾಡುವುದು ಒಳ್ಳೆಯದಲ್ಲ. ನಡೆಯಿರಿ. ದೋಣಿಗಳನ್ನು ಏರಿಕೊಳ್ಳೋಣ" ಎಂದು ಸಮುದ್ರದ ಕಡೆಗೆ ನಡೆದನು.

ಎರಡು ದೋಣಿಗಳೂ ಅವರನ್ನು ಏರಿಸಿಕೊಂಡು, ಹುಟ್ಟುಗಳ ಸಹಾಯದಿಂದ ಸಮುದ್ರದಲ್ಲಿ ತೂರಿಕೊಂಡು ಹೋದುವು. ಸಮುದ್ರ ಜಲರಾಶಿ ಇನ್ನೂ ಅಲ್ಲಕಲ್ಲೋಲವಾಗಿಯೇ ಇದ್ದಿತು. ಆದರೆ ತುಫಾನಿನ ವೇಗವು ಕಡಿಮೆಯಾಗುತ್ತಾ ಬರುತ್ತಿದ್ದಿತು. ಮಿಂಚೂ ಗುಡುಗೂ ದೂರದೂರ ಹೋಗುತ್ತಿದ್ದುವು. ಹನಿಮಳೆಯೂ, ಸಣ್ಣಸಣ್ಣ ಗಾಳಿಯೂ ಬರುತ್ತಿದ್ದುವು. ಆಗಲೇ ಸೂರ್ಯನು ಅಸ್ತಮಿಸಿದ್ದನು. ದಿಕ್ಕುಗಳಲ್ಲಿ ಕವಿದು ಬರುತ್ತಿದ್ದ ದಟ್ಟವಾದ ಕಗ್ಗತ್ತಲೆಯನ್ನು, ಆಗಲೇ ಮೂಡುತ್ತಿದ್ದ ಹುಣ್ಣಿಮೆ ಚಂದ್ರನು ಸಮುದ್ರ ತೀರದಲ್ಲಿರುವ ಮರಗಳ

ಗುಂಪಿನ ಕಡೆಗೂ, ಸಮುದ್ರ ಗರ್ಭದೊಳಗೂ ತನ್ನ ಬೆಳುದಿಂಗಳನ್ನು ಹಾಯಿಸಿ ಓಡಿಸುತ್ತಿದ್ದನು. ಪ್ರಕೃತಿ ಉಲ್ಲಸಿತವಾಗಿತ್ತು.

ದೋಣಿಗಳು ನಿರಾತಂಕವಾಗಿ ಸಮುದ್ರದಲ್ಲಿ ಬಹಳ ದೂರಕ್ಕೆ ಸಾಗಿದುವು. ಯಾವ ದಿಕ್ಕಿಗೆ ಹೋಗುತ್ತೇವೆ ? ಎಲ್ಲಿಗೆ ಹೋಗಬೇಕು ? ಏನು ಮಾಡಬೇಕು ? ಎಂಬ ಆಲೋಚನೆ ಯಾರಿಗೂ ಇರಲಿಲ್ಲ. ಕ್ರೂರನಾದ ನರವಾಹನ ಮಿಶ್ರನ ಕೈಗೆ ಸಿಕ್ಕದಿರುವ ವರೆಗೆ ಎಲ್ಲಿಗೆ ಹೋದರೂ ಒಂದೇ ಎಂದು ಮಂದರದೇವನೂ ಸೈನಿಕರೂ ಭಾವಿಸಿ ಕೊಂಡಿದ್ದರು. ತಮ್ಮನ್ನು ಹುಡುಕಿಕೊಂಡು ಶತ್ರುಗಳು ಬರುವುದಿಲ್ಲವಷ್ಟೆ ? ಎಂದು ನಾಲ್ಕು ಸುತ್ತಲೂ ಕಣ್ಣು ಹರಿಯುವಷ್ಟು ದೂರದವರೆಗೆ ನೋಡಿ ಕೊಂಡೇ ದೋಣಿಗಳನ್ನು ಸಾಗಿಸುತ್ತಿದ್ದರು. ಅವರ ಪುಣ್ಯದಿಂದ ಚಂದ್ರಕಿರಣ ರೇಖೆಗಳಿಂದ ಸಮುದ್ರವು ಪ್ರಶಾಂತವಾಗಿದ್ದಿತು.

ಹೀಗೆ ನಾಲ್ಕೈದು ಗಂಟೆಗಳಷ್ಟು ಕಾಲ ಸಮುದ್ರ ದಲ್ಲಿ ಸಾಗುತ್ತಿರಲು ದೂರದಲ್ಲಿ ಸಮುದ್ರದ ಅಲೆಗಳ ಮೇಲೆ ಮಿಣುಕು ಮಿಣುಕು ದೀಪಗಳು ತೇಲಾಡುವ ಕಾಂತಿ ಕಾಣತೊಡಗಿತು. ಅಷ್ಟು ದೊಡ್ಡ ತುಫಾನಿನ ಕಾಲದಲ್ಲಿ ಮೀನು ಹಿಡಿಯುವ ವರು ಅಷ್ಟು ದೂರದ ವರೆಗೆ ಸಮುದ್ರ ಪ್ರಯಾಣ ಮಾಡುವ ಹಳ್ಳಿಯವರಾರೂ ಇರಲಾರರು. ಹಾಗಾದರೆ ಒಂದು ವೇಳೆ ತಮ್ಮನ್ನು ಹುಡುಕಿ ಹಿಡಿಯಲಿಕ್ಕಾಗಿ ನರವಾಹನ ಮಿಶ್ರನು ಕಳುಹಿಸಿದ ದೋಣಿಗಳೇ ಆಗಿರಲಿಕ್ಕಿಲ್ಲವಷ್ಟೆ ? ಹೇಳುವುದು ಕಷ್ಟವೇ !

ಈ ಭಯಸಂಶಯಗಳು ಮಂದರದೇವನನ್ನು ದೋಣಿಯಲ್ಲಿ ಎದ್ದು ನಿಲ್ಲಿಸಿತು. ಮಿನುಗುವ ದೀಪಗಳ ಕಾಂತಿ ಅವರ ಕಡೆಗೇ ಬರುತ್ತಿದ್ದುವು. ಚೆನ್ನಾಗಿ ಪರೀಕ್ಷಿಸಿ ನೋಡಿದಾಗ ಅವು ಸಾಧಾರಣ




ವಾದ ಎರಡು ದೋಣಿಗಳೇ ಎಂದು ಮಂದರ ದೇವನಿಗೆ ಗೊತ್ತಾಯಿತು. ಹೆಚ್ಚು ದೀಪಗಳಿರುವಂತೆ ಕಂಡುದು ನೀರಿನಲ್ಲಿ ತೋರಿದ ಪ್ರತಿಬಿಂಬಗಳೇ.

ಸ್ವಲ್ಪ ಮಟ್ಟಿಗೆ ಶಾಂತವಾಗಿರುವ ಈ ಸಮುದ್ರ ದಲ್ಲಿ ಇನ್ನೊಂದು ಸಣ್ಣ ಯುದ್ಧವು ತಪ್ಪುವಂತಿಲ್ಲ ವೇನೊ ? ಆ ದೀಪಗಳ ಕಾಂತಿಯ ದೋಣಿಯವರು ನಮ್ಮ ಹಾಗೆಯೇ ತಪ್ಪಿಸಿಕೊಂಡು ಹೋಗುವ ನಮ್ಮ ದೇಶದವರೇ ಆದರೆ ಚಿಂತಿಸಬೇಕಾಗಿಲ್ಲ. ಅದಕ್ಕೆ ವಿರುದ್ಧವಾಗಿದ್ದರೆ ಅವು ಕುಂಡಲಿನಿಯ ದೋಣಿ ಗಳೇ ಆಗಿರಬೇಕು. ನಮ್ಮಲ್ಲಿ ಬಿಲ್ಲು ಬಾಣಗಳಿಲ್ಲ ಅಲ್ಲವೇ ?" ಎಂದು ಮಂದರದೇವನು ಸೈನಿಕರಿಗೆ ಪ್ರಶ್ನೆ ಮಾಡಿದನು. ಪ್ರಶ್ನೆಯೊಂದಿಗೇ ಇದೊಂದು ವ್ಯರ್ಥ ಪ್ರಶ್ನೆಯೆಂದು ಅವನಿಗೇ ತೋರಿತು.

ಕೂಡಲೇ ಒಬ್ಬ ಸೈನಿಕನು "ಮಹಾರಾಜಾ. ನಮ್ಮ ಹತ್ತಿರ ಖಡ್ಗಗಳ ಹೊರತು ಮತ್ತೇನೂ ಇಲ್ಲ. ಮಹಾಮಂತ್ರಿಯವರು ನಾವು ನಾಲ್ವರನ್ನೂ

ನಿಮ್ಮ ರಕ್ಷಣೆಗೆ ಹೋಗುವಂತೆ ಅವಸರಪಡಿಸಿದಾಗ ನಾವು ಹೇಗಿದ್ದೆವೋ ಹಾಗೆಯೇ ಹೊರಟು ಬಂದು ಬಿಟ್ಟೆವು" ಎಂದನು.

"ಪರವಾಗಿಲ್ಲ" ಎಂದು ಮಂದರದೇವನು, "ನಮ್ಮ ಸಂರಕ್ಷಕಿ ಮರಾಳದೇವಿಯ ಕರುಣೆಯೂ ನಮ್ಮ ಹರಿತವಾದ ಕತ್ತಿಗಳೂ ನಮ್ಮ ರಕ್ಷಣೆಗೆ ಸಾಕು. ಒಂದು ವೇಳೆ ಮರಣವೇ ತಪ್ಪದೆ ಹೋದರೆ ನಮ್ಮ ಶರೀರವು ಸಮುದ್ರ ಗರ್ಭದ ಮೀನುಗಳಿಗೋ, ಕ್ರಿಮಿ ಕೀಟಗಳಿಗೋ ಆಹಾರವಾಗುತ್ತದೆ. ಅದೂ ಒಳ್ಳೆಯದೇ !" ಎಂದನು.

ಮಂದರದೇವನ ಮಾತುಗಳನ್ನು ಕೇಳಿ ಸೈನಿಕರಿಗೆ ಅತ್ಯಂತ ಧೈರ್ಯ ಬಂದಿತು. ನೋಡ ನೋಡು ತ್ತಿದ್ದಂತೆಯೇ ದೂರದಲ್ಲಿದ್ದ ಮಿನುಗುವ ದೀಪಗಳು ಇನ್ನಷ್ಟು ಸಮೀಪ ಬಂದುವು.

ಕಣ್ಣಿನ ಅಳವಿಗೆ ಸರಿಯಾಗಿ ಬರಲು, ಆ ದೋಣಿ ಗಳಿಂದ ದೀರ್ಘಕಾಯದ ಆಜಾನುಬಾಹುವೊಬ್ಬನು ಕೈಯಲ್ಲಿ ಬಿಲ್ಲಿನೊಂದಿಗೆ ಎದ್ದು ಗುರಿಹಿಡಿದು ನಿಂತುದೂ ಕಾಣಿಸಿತು. ಚಂದ್ರಕಾಂತಿಯಲ್ಲಿ ಅವನ ಮುಖ ಕವಳಿಕೆಗಳು ಸರಿಯಾಗಿ ಕಾಣದೆ ಹೋದರೂ, ಅವನು ಬಲಿಷ್ಠನಾದ ಕಟ್ಟಾಳುವಾಗಿ ಕಂಡುಬಂದನು.

"ಅನುಮಾನವು ನಿಜವಾಯಿತು. ಅವರು ಬಿಲ್ಲು ಬಾಣಗಳೊಂದಿಗೆ ಸರ್ವ ಸನ್ನದ್ಧರಾಗಿ ಬಂದಿದ್ದಾರೆ. ಆದ್ದರಿಂದ ಅವರು ನಮ್ಮ ಕೈಯಳವಿಗೆ ಬರುವ ವರೆಗೆ ನಾವು ಅವರ ಬಾಣಗಳ ಗುರಿಗೆ ತಪ್ಪಲೇ ಬೇಕು. ದೋಣಿಯೊಳಗೆ ಕುಳಿತುಬಿಡುವುದೇ ಈಗಿನ ಉಪಾಯ" ಎಂದು ಮಂದರದೇವನು ಎಚ್ಚರಿಸು ವುದರೊಳಗೆ ರಿವ್ವನೆ ಬಂದ ಒಂದು ಬಾಣವು ಮಂದರದೇವನ ದೋಣಿಗೆ ಹೊಡೆಯಿತು.

ಕೂಡಲೇ ಮಂದರದೇವನೂ ಸೈನಿಕರೂ ದೋಣಿಯ ಒಳಭಾಗದಲ್ಲಿ ತಲೆ ಬಗ್ಗಿಸಿಕೊಂಡು ಕುಳಿತರು. ಇದಿರು ಪಕ್ಷದ ದೋಣಿಗಳಲ್ಲಿರುವವರು ಒಬ್ಬರನ್ನೊಬ್ಬರು ಎಚ್ಚರಿಸುವುದೂ, ಬಲವಾಗಿ ಹುಟ್ಟು ಹಾಕುವುದೂ, ಬಗ್ಗಿ ಕುಳಿತ ಮಂದರ



ದೇವನಿಗೂ, ಸೈನಿಕರಿಗೂ ಕೇಳುತ್ತಲೇ ಇದ್ದಿತು. ಅದರಿಂದ ಅವರು ತಮ್ಮನ್ನು ಹತ ಮಾಡಲು ಬರುವ ಶತ್ರುಪಕ್ಷದವರೆಂದೇ ಅರ್ಥವಾಯಿತು. ಅವರು ಎಷ್ಟು ಸಮೀಪ ಬರುವರೆಂಬುದೂ ತಿಳಿಯುತ್ತಿತ್ತು. ಅತಿ ವೇಗದಲ್ಲಿ ಸಮೀಪಿಸುವ ಆ ದೋಣಿಗಳು ತಮ್ಮ ಕಕ್ಷ್ಮಿಯ ಪೆಟ್ಟಿಗೆ ಸಮೀಪ ಬರುವವರೆಗೂ ಮಾತಾಡದೆ ಬಗ್ಗಿ ಕುಳಿತುಕೊಳ್ಳದೆ ಬೇರೇನೂ ಉಪಾಯವಿರಲಿಲ್ಲ. ಆಮೇಲೆ ಖಾಡಾ ಖಾಡೀ ಯುದ್ಧದಲ್ಲಿ ಯಾರ ಅದೃಷ್ಟ ಹೇಗೋ ಹಾಗಾಗುತ್ತದೆ.

ಹೀಗೆ ಆಲೋಚಿಸುತ್ತ ತೆಪ್ಪಗೆ ಹೊಂಚಿ ಕುಳಿತಿದ್ದ ಮಂದರದೇವನಿಗೂ, ಸೈನಿಕರಿಗೂ ತೀರ ಸಮೀಪದಲ್ಲಿ "ಜೈ ಸಮರಸೇನಾ" ಎಂಬ ದೊಡ್ಡ ಗರ್ಜನೆಗಳು ಕೇಳಿಸಿತು. ಇದೆಂತಹ ಹೊಸ ಜಯಾಧ್ವಾನವೋ ಎಂದು ಅವರು ಆಶ್ಚರ್ಯದಿಂದ ಹೊರಬೀಳುವುದರೊಳಗೆ ಮಂದರದೇವನು ಕುಳಿತ ದೋಣಿಯನ್ನು ಮತ್ತೊಂದು ದೋಣಿ ವೇಗದಿಂದ ತಾಗಿ ಅಡಿಮೇಲು ಮಾಡುವಷ್ಟರ ಮಟ್ಟಿಗೆ ಹೊಡೆಯಿತು ಆ ಕ್ಷಣದಲ್ಲಿ ಮಂದರದೇವನು ಕತ್ತಿ ಹಿರಿದು ಎದ್ದುನಿಂತನು. ಅದೇ ಕ್ಷಣದಲ್ಲಿ ಅವನ ಬಾಯಿಯಿಂದ ಹೊರಟ "ಜೈ ಮರಾಳೀ !" ಎಂಬ ಸಿಂಹನಾದವು ಸಮುದ್ರ ತರಂಗಗಳಲ್ಲಿ ಮಾರ್ಮೊಳಗಿತು. ಅದರೊಂದಿಗೆ ಮಿಂಚಿನ ಬಳ್ಳಿಯಂತೆ ಸುಳಿದ ಅವನ ಕತ್ತಿ ಒಬ್ಬ ಶತ್ರುವನ್ನು ತಾಗಿತು. ಅವನು ಕೆಟ್ಟ ದನಿಯಿಂದ ಕೂಗಿ ಸಮುದ್ರಕ್ಕೆ ಪ್ರಥಮ ಬಲಿಯಾದನು. ಅಷ್ಟರೊಳಗೆ ಮಂದರದೇವನ ನಾಲ್ವರು ಸೈನಿಕರೂ ಭೀಕರವಾಗಿ ಗರ್ಜಿಸುತ್ತ ಇದಿರಾಳಿಗಳ ದೋಣಿಗಳ ಮೇಲೆ ಹಾರಿದರು. ಆಗ "ಓಹೋಯ್! ನಿಲ್ಲಿರಿ ! ತಾಳಿರಿ ! ನಾವು ಶತ್ರುಗಳಲ್ಲ ! ಮಿತ್ರರು ! ಮಿತ್ರರು !" ಎಂದು ಉಚ್ಚ ಕಂಠದಿಂದ ಹೊರಟ ಕೂಗು ಎಲ್ಲರನ್ನೂ ಸ್ತಬ್ಧಗೊಳಿಸಿತು.

ಅಷ್ಟರೊಳಗೇ ಮಂದರದೇವನ ಸೈನಿಕರ ಕತ್ತಿಗಳ ಹೊಡೆತಕ್ಕೆ ಮತ್ತಿಬ್ಬರು ಸೈನಿಕರು ಸಮುದ್ರಕ್ಕೆ ಹೊರಳಿ ಬಿದ್ದುಬಿಟ್ಟರು.





ಮಂದರದೇವನು ಕತ್ತಿಯನ್ನು ಎತ್ತಿ ಹಿಡಿದು ಝಳಪಿಸುತ್ತ, "ಯಾರು ನೀವು? ಹೇಗೆ ಮಿತ್ರರು? ಕುಂಡಲಿನಿಯನ್ನು ಅಪಹರಿಸಿದ ನರವಾಹನ ಮಿಶ್ರನ ಸೈನಿಕರು ಹೌದೋ ಅಲ್ಲವೋ?" ಎಂದು ಕಠಿಣವಾಗಿ ಪ್ರಶ್ನಿಸಿದನು.

"ನಾವು ಕುಂಡಲಿನೀ ದ್ವೀಪರಾಜ ನಿವಾಸಿಗಳೇನೋ ನಿಜವೇ. ಆ ಘಾತುಕನಾದ ನರವಾಹನಮಿಶ್ರನು ನಮಗೆ ಪ್ರಬಲ ಶತ್ರು. ನೀವು ಮರಾಳ ದ್ವೀಪ ವಾಸಿಗಳಾದರೆ ನಾವಿಬ್ಬರೂ ಸ್ನೇಹಿತರೇ ಸರಿ. ಮೊದಲು ಕತ್ತಿಗಳನ್ನು ಕೆಳಗಿಳಿಸಿರಿ" ಎಂದನು ಆ ದೀರ್ಘಕಾಯ.

ಅವರ ಮಾತಿನಲ್ಲಿ ಏನಾದರೂ ಮೋಸವಿದೆಯೇ ಎಂಬ ಸಂಶಯವು ಮಂದರದೇವನಿಗಾಯಿತು. ಏಕೆಂದರೆ ನರವಾಹನ ಮಿಶ್ರನ ಮೋಸದ ರೀತಿ ಅಂತಹುದು! ಇವರೆಲ್ಲ ಅವನ ಬೆಣ್ಣೆ ಪೂಸಿದ ಕತ್ತಿಗಳಾಹರೆ?

"ಹಾಗಾದರೆ ನಿಮ್ಮ ನಾಯಕನಾರು? ಅವನ ಹೆಸರೇನು?" ಎಂದು ಪ್ರಶ್ನಿಸಿದನು ಮಂದರದೇವ.

"ಇಲ್ಲಿ ಈಗ ನಾನೇ ನಾಯಕ. ನನ್ನ ಹೆಸರು ಶಿವದತ್ತ. ಈ ದೋಣಿಗಳಲ್ಲಿರುವವರೆಲ್ಲರೂ ನನ್ನ ಅನುಚರರೇ!" ಎಂದು ಪ್ರತ್ಯುತ್ತರ ಬಂದಿತು.

ಅದನ್ನು ಕೇಳಿದ ಕೂಡಲೇ ಮಂದರದೇವನ ಸಂದೇಹವೆಲ್ಲ ಹಾರಿ ಹೋಗಿ, "ಸ್ವಾಗತ! ಸುಸ್ವಾಗತ! ಶಿವದತ್ತರೇ!" ಎಂದು ಅವನ ಬಳಿಗೆ ಸಾಗುತ್ತಾ, "ಆಹಾ! ಇಪ್ಪತ್ತು ವರ್ಷಗಳ ಹಿಂದೆ, ಅಂದರೆ ನಾನು ಹತ್ತು ವರ್ಷದ ಹುಡುಗನಾಗಿದ್ದಾಗ ನಿಮ್ಮ ಹೆಸರನ್ನೂ, ಕುಂಡಲಿನಿಯ ಮಹಾ ಸೇನಾನಿಗಳಾದ ಸಮರಸೇನರ ಹೆಸರನ್ನೂ ಕೇಳಿದ್ದೇನೆ. ನೀವೂ ಸಮರಸೇನರೂ ಎಲ್ಲಿಯೋ ಭಯಂಕರ ದ್ವೀಪದಲ್ಲಿ ಮಾಡಿದ ಸಾಹಸಮಯ ಕಾರ್ಯಗಳನ್ನು ಕಥೆಗಳ ಹಾಗೆ ಕೇಳುತ್ತಿದ್ದೆ. ಈಗ ಆ ಮಹಾ ಸೇನಾನಿಯ ಮುಖ್ಯ ಸಹಚರರಾದ ನಿಮ್ಮನ್ನು ಇಂತಹ ಆಕಸ್ಮಿಕ ರೀತಿಯಲ್ಲಿ ನೋಡುವ ಭಾಗ್ಯ ನನಗುಂಟಾಗಿದೆ. ಹಾಗಾದರೆ ನಿಮಗೆ ನನ್ನ ಹೃತ್ಪೂರ್ವಕವಾದ ಸುಸ್ವಾಗತವಿದೆ."

"ನೀವು ಯಾರೆಂಬುದನ್ನು ಹೇಳಲೇ ಇಲ್ಲವಲ್ಲ? ಮರಾಳ ದ್ವೀಪದ ರಾಜ್ಯದವರೆಂದು ನಿಮ್ಮ ಜಯಧ್ವಾನದಿಂದ ಗೊತ್ತಾಗಿದೆ. ಈ ಸಣ್ಣ ದೋಣಿಗಳಲ್ಲಿ ಎತ್ತ ಹೊರಟಿರಿ? ಅಲ್ಲಿಯ ರಾಜ ಮಂದರದೇವ ನೀವಲ್ಲವಷ್ಟೇ?" ಎಂದನು ಶಿವದತ್ತ.

"ಸದ್ಯ ಅಲ್ಲವೆಂಬುದು ನಿಜ. ಈಗ ಕೆಲವು ಗಂಟೆಗಳ ಹಿಂದಿನವರೆಗೆ ನಾನು ಮರಾಳ ದ್ವೀಪದ ರಾಜ ಮಂದರದೇವನಾಗಿದ್ದೆ. ಆದರೆ ಈಗ ನಿಮ್ಮ ಮುಂದೆ ಕೇವಲ ಮಂದರದೇವ ಮಾತ್ರನೇ ಆಗಿ ನಿಂತಿದ್ದೇನೆ.

ನನ್ನ ರಾಜ್ಯ, ನನ್ನ ಕಿರೀಟ, ಎಲ್ಲಾ ಆ ಘಾತಕ ನರವಾಹನ ಮಿಶ್ರನ ವಶವಾಗಿ ಹೋಯಿತು. ನಾವು

ಹೀಗೆ ಸಮುದ್ರದ ಪಾಲಾಗಿ ಅಲೆಯ ಬೇಕಾಗಿ ಬಂತು." ಎಂದನು ಮಂದರದೇವ.

ಶಿವದತ್ತನು ಏನೂ ಹೇಳದಾದನು. ಅವನ ಅನುಚರರೊಂದಿಗಿರುವ ಆ ಎರಡು ದೋಣಿಗಳೂ ಮಂದರದೇವನ ದೋಣಿಯ ಹತ್ತಿರ ಒರೆಸಿಕೊಂಡು ನಿಂತವು. ಶಿವದತ್ತನು ಮಂದರದೇವನ ದೋಣಿಗೆ ಬಂದನು. ಅವನು ಏನೋ ಮುಖ್ಯ ವಿಷಯ ಹೇಳಲಿಕ್ಕೆ ಹೀಗೆ ಬರುವನೆಂದು ತಿಳಿದು ಮಂದರದೇವನು ಅವನಿಗೆ ತನ್ನ ಪಕ್ಕದಲ್ಲಿ ಕುಳಿತುಕೊಳ್ಳಲು ಸ್ಥಳ ತೋರಿಸಿದನು.

ಶಿವದತ್ತನು ಕುಳಿತುಕೊಂಡು, "ರಾಜ್ಯದೊಂದಿಗೆ ರಾಜ ಎಂಬ ಬಿರುದು ಕೂಡಾ ಹೋಯಿತೆಂದರೆ ನಿಮ್ಮ ಮಟ್ಟಿಗೆ ಸತ್ಯವಾದರೂ ಉಳಿದವರು ನಿಮ್ಮನ್ನು ರಾಜರೆಂದೇ ಹೇಳುತ್ತಾರೆ. ಸರಿ, ನಾನು ನಿಮ್ಮನ್ನು ಮಂದರದೇವನೆಂದೇ ಕರೆಯುತ್ತೇನೆ. ಅದಿರಲಿ, ಈಗ ನಿಮ್ಮ ಪ್ರಯಾಣವು ಎತ್ತ ಕಡೆಗೆ ? ನಿಮ್ಮ ಗಮ್ಯಸ್ಥಾನ ಯಾವುದೆಂದು ತಿಳಿಯಬಹುದೆ ?" ಎಂದು ಕೇಳಿದನು.

ಮಂದರದೇವನು ಒಂದು ನಿಟ್ಟುಸಿರು ಮಾತ್ರ ಬಿಟ್ಟನು. ಆಮೇಲೆ ಮುಗುಳುನಗು ಸೂಸಿದನು. "ಶಿವದತ್ತರೇ, ನನ್ನ ಗಮ್ಯಸ್ಥಾನ ಯಾವುದೆಂದು ನನಗೇ ಗೊತ್ತಿಲ್ಲ. ನರವಾಹನ ಮಿಶ್ರನ ಕೈಗೆ ಸಿಕ್ಕಿ ಬೀಳದಂತೆ ತಪ್ಪಿಸಿಕೊಂಡು ಹೋಗುವುದೇ ಪ್ರಸ್ತುತದಲ್ಲಿ ನಾನು ಮಾಡುವ ಕೆಲಸವಾಗಿದೆ. ಇವರು ನಾಲ್ವರೂ ನನ್ನ ವಿಶ್ವಾಸದ ಸೈನಿಕರು ಜೀವಕ್ಕೆ ಜೀವ ಕೊಡುವವರು " ಎಂದನು.

"ಬಹಳ ಚೆನ್ನಾಗಿಯೇ ಸೇರಿದ್ದೇವೆ. ಅಂದರೆ ನಾವಿಬ್ಬರೂ ಒಂದೇ ಬಗೆಯ ಪರಿಸ್ಥಿತಿಯಲ್ಲಿ ಇದ್ದೇವೆಂದಾಯಿತು. ನಾನು ಕೂಡಾ ಆ ಕ್ರೂರನ ದೃಷ್ಟಿಯಿಂದ ತಪ್ಪಿಸಿಕೊಳ್ಳಲಿಕ್ಕಾಗಿಯೇ ಹೀಗೆ ಹೊರಟಿದ್ದೇನೆ " ಎಂದನು ಶಿವದತ್ತ.




ಆ ಸಮಯದಲ್ಲಿ ಮಂದರದೇವನ ಸೈನಿಕರಲ್ಲಿ ಒಬ್ಬನು ಎದ್ದು "ಮಹಾರಾಜರೇ ! ಅಲ್ಲಿ ಯಾವುದೋ ಒಂದು ತೀರವು ಕಾಣುವಹಾಗಿದೆ. ಒಂದೇ ಬಾರಿಗೆ ಅಷ್ಟೊಂದು ದೀಪಗಳು ಕದಲುತ್ತಿವೆ. ಏನೋ ಆಶ್ಚರ್ಯವಲ್ಲವೇ ? ಅವೆಲ್ಲಾ ಸಮುದ್ರದಲ್ಲಿ ಹೊರಟಿರುವ ದೋಣಿಗಳೆಂದು ಕಾಣುತ್ತದೆ. ಶತ್ರುಗಳು ನಮ್ಮನ್ನು ಹುಡುಕಿಕೊಂಡು ಹೀಗೆ ಬರುತ್ತಿರುವರೋ ಏನೋ ? ಅಥವಾ ಆ ಕಡೆಯ ತೀರದ ಜನರೋ ? ಯಾವುದಕ್ಕೂ ನಾವು ಎಚ್ಚರದಲ್ಲಿ ರೋಣ" ಎಂದನು.

ಶಿವದತ್ತನೂ ಮಂದರದೇವನೂ ಆ ಕಡೆಗೆ ನೋಡಿದರು. ಸೈನಿಕನು ಹೇಳಿದುದರಲ್ಲಿ ಅತಿಶಯೋಕ್ತಿ ಏನೂ ಇರಲಿಲ್ಲ. ಆ ತೀರದಲ್ಲಿ ಕಾಣುವ ಪ್ರಾಂತವೆಲ್ಲವೂ ದೀಪಗಳ ಕಾಂತಿಯಿಂದ ಪ್ರಕಾಶಿಸಿಕೊಂಡಿತ್ತು. ಗಾಳಿಯಲ್ಲಿ ಹಾರಾಡುವ ದೊಡ್ಡ ದೊಡ್ಡ ಮಿಂಚುಹುಳಗಳೋ ಎಂಬ ಹಾಗೆ ಸಮುದ್ರ ಜಲದ ತೆರೆಗಳೊಂದಿಗೆ ದೀಪಗಳೊಂದಿಗಿರುವ ದೋಣಿ

ಗಳು ಮೇಲಕ್ಕೂ ಕೆಳಕ್ಕೂ ಇಳಿದೇರಿಕೊಂಡಿದ್ದುವು. "ನಮಗೆ ಅವುಗಳ ಗೊಡವೆಯೇ ಬೇಡ. ಸಮುದ್ರದಲ್ಲಿ ಅವುಗಳ ವಿರುದ್ಧ ದಿಕ್ಕಿಗೆ ಎಷ್ಟು ದೂರಕ್ಕೆ ಬೇಗನೇ ಹೋಗಲು ಸಾಧ್ಯವೋ ಅಷ್ಟು ದೂರ ಹೋಗಿಬಿಡುವುದೇ ಒಳ್ಳೆಯದು. ನಮ್ಮ ಅದೃಷ್ಟ ಚೆನ್ನಾಗಿದ್ದರೆ ಯಾವುದಾದರೊಂದು ಸುರಕ್ಷಿತ ದ್ವೀಪವನ್ನು ಸೇರುತ್ತೇವೆ. ಇಲ್ಲಿಗೆ ಸಮೀಪದಲ್ಲಿರುವ ದ್ವೀಪಗಳಾವುದೂ ಸುರಕ್ಷಿತವೆನಿಸಲಾರದು. ತಪ್ಪಿದರೆ ನಮ್ಮ ಹಣೆಬರಹದಂತಾಗುತ್ತದೆ. ನಾವು ನರವಾಹನ ಮಿಶ್ರನ ಕೈಗೆ ಸಿಕ್ಕಿ ಸಾಯುವುದನ್ನು ಮಾತ್ರ ಸಹಿಸಲಾರೆವು" ಎಂದನು ಶಿವದತ್ತ.

"ನಿಜ, ನಿಜ. ನಮ್ಮಿಬ್ಬರಿಗೂ ಒಂದೇ ಮನೋಭಾವವೆಂಬುದು ಸ್ಪಷ್ಟವಾಯಿತು" ಎಂದು ಮಂದರದೇವನು ತಲೆಯಾಡಿಸಿದನು. ನಾಲ್ಕು ದೋಣಿಗಳೂ ಹುಟ್ಟುಗಳ ಸಹಾಯದಿಂದ ಮಹಾ ಸಮುದ್ರದ ಮೇಲೆ ಹೊರಟುವು.

ನಿಜಕ್ಕೂ ಅಲ್ಲಿ ಕಾಣುವ ದೀಪಗಳು ನರವಾಹನ ಮಿಶ್ರನ ನಾವಿಕದಳದ ನೌಕೆಗಳದೇ. ಅವು ತಮ್ಮನ್ನು ಕಂಡು ಹಿಡಿದು ಬೆಂಬತ್ತುವುದನ್ನು ನೋಡಿ ಶಿವದತ್ತನು ತನ್ನ ದೋಣಿಗಳಲ್ಲಿದ್ದ ದೀಪಗಳನ್ನು ನಂದಿಸಿ ಹಾಕಿಸಿದನು. ಈಗ ನಾಲ್ಕು ದೋಣಿಗಳೂ ಕೇವಲ ಚಂದ್ರಪ್ರಕಾಶದಲ್ಲೇ ಸಾಗತೊಡಗಿದುವು ಚಂದ್ರನನ್ನು ಮೇಘಗಳು ಮರೆಸಿಕೊಂಡಿದ್ದುದರಿಂದ ಕವಿದಮುಬ್ಬುಗತ್ತಲೆ ಅವರಿಗೆ ಸಹಾಯಕವೇ ಆಯಿತು. ದೋಣಿಗಳು ಒಂದಕ್ಕೊಂದು ತಾಗಿ ಅಪಾಯ ಉಂಟಾಗದಂತೆ ನಡೆಸುವವರು ಬಹಳ ಜಾಗ್ರತೆಯಾಗಿ ಹುಟ್ಟು ಹಾಕುತ್ತಿದ್ದರು. ಮಂದರದೇವನು ಸುತ್ತಲೂ ಕಣ್ಣು ಹಾಯಿಸಿ ಅಪಾಯವು ದೂರವಾಗುವುದನ್ನು ನೋಡಿ ಸಮಾಧಾನ ಪಟ್ಟು, "ಮರಾಳದೇವಿಯ ಕೃಪೆ! ಸದ್ಯ ಭಯ ದೂರ ಹೋಯಿತು. ಈಗ ನಮ್ಮ ದೋಣಿ ಅವರಿಗೆ ಕಾಣುವುದಿಲ್ಲ. ಈಗ ಹೇಳಿರಿ ಶಿವದತ್ತರೇ, ಕುಂಡಲಿನೀ ದ್ವೀಪವಾಸಿಗಳಾಗಿ, ಮಹಾ ಸೇನಾನಿ ಸಮರಸೇನರ ಬಲಗೈಯಂತಿರುವ ನೀವು ಈ ವಿಧವಾಗಿ ಆ ದ್ವೀಪವನ್ನು ಬಿಟ್ಟು ಏಕೆ ತಪ್ಪಿಸಿಕೊಂಡು ಹೋಗಬೇಕಾಗಿ ಬಂತು? ನಿಮ್ಮಂಥವರಿಗೇ ಈ ಗತಿ ಬಂದುದನ್ನು ನೋಡಿ ನನಗೆ ಆಶ್ಚರ್ಯದೊಂದಿಗೆ ನನ್ನ ಕಷ್ಟ ಸಣ್ಣದೆನಿಸುತ್ತದೆ" ಎಂದನು.

"ಅದೆಲ್ಲವೂ ಆ ನರವಾಹನ ಮಿಶ್ರನ ಕುಟಿಲ ರಾಜನೀತಿಯ ಪ್ರಭಾವ. ಆದರೂ ಇದರಲ್ಲಿ ಸಮರಸೇನನ ತಪ್ಪೂ ಸ್ವಲ್ಪ ಇಲ್ಲದೆ ಹೋಗಲಿಲ್ಲ. ಆ ಸಂಗತಿಯನ್ನೆಲ್ಲಾ ಹೇಳುತ್ತೇನೆ; ಸಾವಧಾನವಾಗಿ ಕೇಳಿರಿ" ಎಂದು ಶಿವದತ್ತನು ಹೇಳಲು ಪ್ರಾರಂಭಿಸಿದನು.

—(ಇನ್ನೂ ಇದೆ)





# ಸೇನಾಧ್ಯಕ್ಷನ ಆಯ್ಕೆ

ದಿನಾ ಬೇಸರವಿಲ್ಲದೆ ಉದಯಿಸುವ ಸೂರ್ಯನ ಹಾಗೆ ಸ್ವಲ್ಪವೂ ಬೇಸರಪಡದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ, ತನ್ನ ಹೆಗಲಿಗೇರಿಸಿಕೊಂಡು ಎಂದಿನಂತೆ ಮೌನದಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ಒಂದೊಂದು ಸಾರಿ ಮನುಷ್ಯರ ಆಲೋಚನೆಯ ಧೋರಣೆ ಬುದ್ಧಿವಂತಿಕೆಯಿಂದ ಕೂಡಿದಂತೆನಿಸಿದರೂ ಇನ್ನೊಬ್ಬರ ದೃಷ್ಟಿಯಲ್ಲಿ ಶುದ್ಧ ಹೆಡ್ಡುತನವೆನಿಸುವುದು. ನಿನ್ನದು ಹೇಗಾಗುವುದೋ ಎಂಬುದು ನನಗೇನೋ ಸಂದೇಹವಾಗಿದೆ. ಇದಕ್ಕೆ ಉದಾಹರಣೆಯಾಗಿ ನನಗೆ ಚಿತ್ರಪುರಿ ಮಹಾರಾಜನ ಕಥೆಯೊಂದು ನೆನಪಿಗೆ ಬರುತ್ತದೆ. ನಿನಗೆ ದಾರಿಯ ಶ್ರಮವಾದರೂ ಮರೆಯುವಂತೆ ಆ ಕಥೆಯನ್ನು ಹೇಳುತ್ತೇನೆ. ಎಂದು ಕಥೆಯನ್ನು ಹೇಳಲು ಪ್ರಾರಂಭಿಸಿತು :

ಒಂದುಸಾರಿ ಚಿತ್ರಪುರ ರಾಜ್ಯದ ಸೇನಾಧ್ಯಕ್ಷ ಪದವಿಗೆ ಸಮಸ್ಯೆಯೊಂದು ಅಡ್ಡ ಬಂದಿತು.

ಬೇತಾಳ ಕಥೆಗಳು...



ಬೇಕೋ ಗೊತ್ತಾಗಲಿಲ್ಲ. ಮಂತ್ರಿಗಳು ಕೂಡಾ ಒಂದು ನಿರ್ಣಯಕ್ಕೆ ಬರಲಾರದೆ ಹೋದರು.

ಆ ಸಂದರ್ಭದಲ್ಲಿ ಚಿತ್ರಗ್ರೀವ ರಾಜನಿಗೆ ಒಂದು ಆಲೋಚನೆ ಬಂತು. ಚೇತನವರ್ಮ, ಚಂದನ ವರ್ಮರ ಮನೋಭಾವ ಎಂತಹುದೆಂದು ತಿಳಿದು ಪದವಿ ನಿರ್ಣಯ ಮಾಡಬಹುದೆಂದುಕೊಂಡನು. ಚಿತ್ರಪುರ ರಾಜ್ಯದ ಮೇಲೆ ಬಹಳ ಕಾಲದಿಂದ ಶತ್ರುಭಾವಗೊಂಡಿರುವ ಎರಡು ರಾಜ್ಯಗಳು ನೆರೆಹೊರೆಗಳಲ್ಲೇ ಇದ್ದುವು. ಆ ರಾಜ್ಯಗಳನ್ನು ಆಕ್ರಮಿಸುವುದರಲ್ಲಿ ಅವರು ತೋರಿಸುವ ಬುದ್ಧಿ ವಂತಿಕೆಯನ್ನು ಹಿಡಿದು, ಅವರಿಬ್ಬರಲ್ಲಿ ಒಬ್ಬನನ್ನು ಸರ್ವ ಸೇನಾಧ್ಯಕ್ಷ ಪದವಿಗೆ ನಿಯಮಿಸಬಹುದು.

ಈ ತನ್ನ ನಿರ್ಣಯವನ್ನು ರಾಜನು ಆ ಉಪಸೇನಾಧಿಪತಿಗಳಿಬ್ಬರಿಗೂ ತಿಳಿಸಿದನು. ಇದಕ್ಕೆ ಇಬ್ಬರೂ ತಮ್ಮ ಅಮೋದನೆ ತಿಳಿಯಪಡಿಸಿದರು. ಮೊದಲು ರಾಜನು ಚೇತನವರ್ಮನ ಕೈಕೆಳಗೆ ಸಣ್ಣದೊಂದು ಸೈನ್ಯ ವಿಭಾಗವನ್ನು ಕೊಟ್ಟು, ಒಬ್ಬ ಶತ್ರುರಾಜನನ್ನು ಜಯಿಸಿ ಬರಬೇಕೆಂದನು.

ಚೇತನವರ್ಮನು ಅತ್ಯುತ್ಸಾಹದಿಂದ ಶತ್ರು ರಾಜನ ಮೇಲೆ ದಂಡೆತ್ತಿ ಹೋದನು. ನಿಜಕ್ಕೂ ಶತ್ರುವಿನ ಸೇನಾಸಂಖ್ಯೆಗಿಂತಲೂ ಚೇತನವರ್ಮನ ಸೈನ್ಯದ ಸಂಖ್ಯೆ ಬಹಳ ಕಡಿಮೆ. ಯುದ್ಧೋತ್ಸಾಹದಲ್ಲಿರುವ ಚೇತನವರ್ಮನು ಈ ಸಂಗತಿಯನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಅವನ ದೃಷ್ಟಿ ತನ್ನ ಬಾಹುಬಲದ ಮೇಲೆಯೂ, ಸರ್ವ ಸೇನಾಧ್ಯಕ್ಷ ಪದವಿಯ ಮೇಲೆಯೂ ನೆಲೆಸಿತ್ತು.

ಯುದ್ಧವು ತೀರಾ ಶುರುವಾದ ಮೇಲೆ, ಅವನ ಸೈನಿಕರಲ್ಲಿ ಮುಕ್ಕಾಲು ಭಾಗದಷ್ಟು ಮಡಿದರು, ಅಥವಾ ಗಾಯಗೊಂಡರು. ಅಳಿದುಳಿದ ಸೈನ್ಯ ದೊಂದಿಗೆ ಅವನು ಹಿಂದಿರುಗಿ ಹೋಗಬೇಕೆಂದಿರು ವಾಗ, ತನಗೇ ವಿಜಯವೆಂಬ ಗರ್ವದಿಂದಲೂ

ಮೊದಲಿನ ಸರ್ವ ಸೇನಾಧ್ಯಕ್ಷನು ಆಕಸ್ಮಿಕ ಸಾವಿಗೆ ಗುರಿಯಾದುದರಿಂದ ಆ ಪದವಿಗೆ ಯಾರನ್ನು ನಿಯಮಿಸುವುದೆಂಬ ಪ್ರಶ್ನೆಯುಂಟಾಯಿತು. ಸಾಧಾರಣವಾಗಿ ಉಪಸೇನಾಧಿಪತಿಯಾಗಿದ್ದವನನ್ನೇ ಆ ಸ್ಥಾನಕ್ಕೆ ನಿಯಮಿಸುವುದು ವಾಡಿಕೆಯಾಗಿ ಬಂದ ಪದ್ಧತಿ. ಚಿತ್ರಪುರ ರಾಜ್ಯದ ಹಿಂದಿನ ರಾಜರಿಂದ ಕೂಡಾ ಅದೇ ಪದ್ಧತಿ ನಡೆದು ಬಂದಿತ್ತು. ಆದರೆ ಈಗ ಬಂದ ಪರಿಸ್ಥಿತಿ ಈ ಮೊದಲು ಬಂದ ಹಾಗಲ್ಲ. ಸೇನಾಧ್ಯಕ್ಷ ಪದವಿಗೆ ಅರ್ಹನಾದ ಉಪ ಸೇನಾಧಿಪತಿಗಳು ಇಬ್ಬರಿದ್ದರು. ಒಬ್ಬನ ಹೆಸರು ಚೇತನವರ್ಮನೆಂದು. ಇನ್ನೊಬ್ಬನು ಚಂದನವರ್ಮ. ಇಬರ ಕೈಕೆಳಗೂ ಸರಿಸಮನಾದ ಸೇನೆಯ ಸಂಖ್ಯೆ ಯಿದ್ದಿತು. ಇಬ್ಬರೂ ಸೇನಾನಿಗಳಾಗಿ ಶೌರ್ಯ ಪರಾಕ್ರಮಗಳಲ್ಲಿ ದೊಡ್ಡ ಹೆಸರು ಪಡೆದವರೇ.

ರಾಜನಾದ ಚಿತ್ರಗ್ರೀವನಿಗೆ ಆ ಇಬ್ಬರಲ್ಲಿ ಯಾರನ್ನು ಸರ್ವ ಸೇನಾಧ್ಯಕ್ಷಪದವಿಗೆ ನಿಯಮಿಸ

ಧೈರ್ಯದಿಂದಲೂ ಶತ್ರುರಾಜನು ಕೆಲವೇ ಮಂದಿ ಅಂಗರಕ್ಷಕರೊಂದಿಗೆ ಚೇತನವರ್ಮನ ದಾರಿಯನ್ನು ಅಟಕಾಯಿಸಿದನು. ಇದು ವೀರನಾದ ಚೇತನ ವರ್ಮನಿಗೆ ನವೋತ್ಸಾಹವನ್ನುಂಟುಮಾಡಿತು. ಅವನು ಆತ್ಮಾವೇಶದಿಂದ ಆ ಶತ್ರುರಾಜನನ್ನು ಮುತ್ತಿ ಹೆದರಿಸಿ, ಅವನಿಂದ ತಾನು ಚಿತ್ರಪುರಿ ರಾಜನ ಸಾಮಂತನೆಂದು ಸಂಧಿಪತ್ರ ಬರೆಯಿಸಿ ತೆಗೆದು ಕೊಂಡನು. ಹೀಗೆ ಥಕ್ಕನೆ ವಿಜಯಶಾಲಿಯಾಗಿ ಚೇತನವರ್ಮನು ಗೆಲುವೆಯ ಹೆಮ್ಮೆಯೊಂದಿಗೆ ಚಿತ್ರಪುರಿಗೆ ಹಿಂದಿರುಗಿದನು.

ತರುವಾಯ ಚಿತ್ರಗ್ರೀವ ರಾಜನು ಚಂದನ ವರ್ಮನಿಗೆ ಕೂಡಾ, ಚೇತನವರ್ಮನಿಗೆ ಕೊಟ್ಟಷ್ಟೇ ಸೈನ್ಯವನ್ನು ಕೊಟ್ಟು ಇನ್ನೊಬ್ಬ ಶತ್ರುರಾಜನ ಮೇಲೆ ಯುದ್ಧ ಮಾಡಲು ಕಳುಹಿಸಿದನು. ಚಂದನವರ್ಮನು ತನ್ನ ರಾಜ್ಯದ ಮೇರೆಯನ್ನು ದಾಟಿ ಒಮ್ಮೆಗೇ ಯುದ್ಧಕ್ಕೆ ಹೋಗಿಬಿಡಲಿಲ್ಲ. ಅವನು ಸರಹದ್ದು ಪ್ರಾಂತದಲ್ಲಿ ಬೀಡುಬಿಟ್ಟು ಗೂಢಚಾರರ ಮೂಲಕ ಶತ್ರುರಾಜನ ಬಲವನ್ನೂ, ಕೋಟೆಯ ರಕ್ಷಣೆ ಎಂತಹುದೆಂಬುದನ್ನೂ ತಿಳಿದು ಕೊಳ್ಳತೊಡಗಿದನು. ಒಂದುವೇಳೆ ಶತ್ರುರಾಜನು ತಾವಿರುವಲ್ಲಿಗೆ ಕೋಟೆ ಬಿಟ್ಟು ದಂಡೆತ್ತಿ ಬಂದು ಬಿಟ್ಟರೆ, ಅವನನ್ನು ಸರಹದ್ದುದಾಟಿ ಮುಂದೆ ಬಾರದಂತೆ ತಡೆಯುವಷ್ಟು ಸೈನಿಕಬಲ ಮಾತ್ರವೇ ತನ್ನ ಬಳಿಯಲ್ಲಿರುವುದಾಗಿ ಅವನಿಗೆ ಗೊತ್ತಾಯಿತು.

ಅಂತಲೇ ಚಂದನವರ್ಮನು ಹಿಂದಿರುಗಿ ಬಂದು ಚಿತ್ರಗ್ರೀವ ರಾಜನನು ನೋಡಿ, "ಮಹಾಪ್ರಭೂ, ನಾನು ಗೂಢಚಾರರ ಮೂಲಕ ಶತ್ರುರಾಜನ ಸೈನಿಕ ಬಲವನ್ನೂ, ಕೋಟೆಯ ರಕ್ಷಣೆಯ ಸಂಗತಿ ಯನ್ನೂ ತಿಳಿದುಕೊಂಡೆನು. ನಾನು ನಮ್ಮ ಸೈನ್ಯ ದೊಂದಿಗೆ ಮುಂದುವರಿದು ಮುತ್ತಿಗೆ ಹಾಕು ವುದೆಂದರೆ ನಮಗೆ ದೊಡ್ಡ ಸೈನಿಕ ನಷ್ಟವೂ, ಬಹುಶಃ ಪೂರ್ತಿ ಸೋಲೂ ಉಂಟಾಗದೆ ಹೋಗದು. ಆದುದರಿಂದ ನಾನು ದಾಳಿಮಾಡುವ ಪ್ರಯತ್ನ ವನ್ನು ಬಿಟ್ಟು ಬಂದಿದ್ದೇನೆ. ನಮಗೆ ವಿಜಯವಾಗ



ಬೇಕಾದರೆ ಮುಖ್ಯವಾಗಿ ಇನ್ನೂ ಇಮ್ಮಡಿ ಬಲವು ನಮಗೆ ಬೇಕು" ಎಂದು ನಿವೇದಿಸಿದನು.

ರಾಜನು ಅವನ ಮಾತನ್ನು ಒಪ್ಪಿಕೊಂಡನು. ಮಾತ್ರವಲ್ಲದೆ ಅವನನ್ನೇ ಸರ್ವ ಸೇನಾಧ್ಯಕ್ಷ ಪದವಿಗೆ ಆರಿಸಿಕೊಂಡಿರುವುದಾಗಿಯೂ ಪ್ರಕಟ ಪಡಿಸಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ನೀನೇ ಹೇಳು. ವಿಜಯಶಾಲಿಯಾಗಿ ಬಂದವನನ್ನು ಬಿಟ್ಟು ಏನೂ ಮಾಡದೆ ಹಿಂದಿರುಗಿ ಬಂದ ಚಂದನವರ್ಮನನ್ನು ಚಿತ್ರಪುರದ ರಾಜನು ಸರ್ವ ಸೇನಾಧ್ಯಕ್ಷ ಪದವಿಗೆ ಆರಿಸಿಕೊಂಡದ್ದು ಯಾವ ನ್ಯಾಯ? ಶತ್ರುರಾಜನನ್ನು ಜಯಿಸಿ ಸಂಧಿ ಪತ್ರ ಬರೆಯಿಸಿಕೊಂಡು ಬರುವುದೇನು ಸಾಮಾನ್ಯ ಕೆಲಸವೆ? ಯುದ್ಧಕ್ಕೆ ಹೋಗಲಿಕ್ಕೇ ಹೆದರಿದ ಚಂದನವರ್ಮನು, ಯಾವ ಯೋಗ್ಯತೆಯಿಂದ ಸೇನಾಧ್ಯಕ್ಷನಾದನು? ಈ ಪ್ರಶ್ನೆಗಳಿಗೆ ತಕ್ಕ ಉತ್ತರ ತಿಳಿದಿದ್ದೂ ಕೊಡದಿದ್ದರೆ ನಿನ್ನ ತಲೆ ಸಾವಿರ ಚೂರುಗಳಾಗಿ ಹಾರುತ್ತದೆಂಬುದನ್ನು ಮರೆಯಬೇಡ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಚಿತ್ರಗ್ರೀವ ರಾಜನು ಸರಿಯಾಗಿಯೇ ಪ್ರವರ್ತಿಸಿದ್ದಾನೆ. ಸೇನಾಧ್ಯಕ್ಷನಿಗೆ ಇರಬೇಕಾದ ಪ್ರಧಾನ ಲಕ್ಷಣವು ಶತ್ರು ಬಲಕ್ಕೂ, ತನ್ನ ಬಲಕ್ಕೂ ಇರುವ ತಾರತಮ್ಯ ನೋಡಿಕೊಳ್ಳುವುದೇ. ಅಷ್ಟೊಂದು ತಾಳ್ಮೆಯಿಲ್ಲದವನು ವಿಜಯಾಕಾಂಕ್ಷೆಯ ಉತ್ಸಾಹಾವೇಶದಿಂದ ಚೇತನವರ್ಮ ಮಾಡಿದ ಹಾಗೆ ಬಲವಾದ ಶತ್ರುವನ್ನು ಇದಿರಿಸಿ, ವಿಪರೀತ ಸೈನಿಕ ನಷ್ಟವನ್ನುಂಟುಮಾಡಿಕೊಂಡು, ತನ್ನ ರಾಜನಿಗೇ ಅಪಾಯ ತಂದುಬಿಡುವನು. ಚೇತನವರ್ಮನ ವಿಜಯಕ್ಕೆ ಕಾರಣ, ಶತ್ರುರಾಜನ ಅವಿವೇಕವೇ. ವಿಜಯಗರ್ವದಿಂದ ತಲೆತಿರುಗಿ ಸಿಕ್ಕಿಬಿದ್ದುಕೊಂಡನು ಅಷ್ಟೇ. ಚಂದನವರ್ಮನಾದರೋ ತನ್ನ ಬಲವೆಷ್ಟೆಂದು ಚೆನ್ನಾಗಿ ತಿಳಿದವನು. ಗೂಢಚಾರರನ್ನು ಉಪಯೋಗಿಸಿ ಬಲಾಬಲಗಳನ್ನು ತೂಗಿಕೊಂಡನು. ಅದರ ಪರಿಣಾಮವೇನಾದೀತೆಂದೂ ರಾಜನಿಗೆ ಹೇಳಿದನು. ಅಂಥವನ ಸೇನಾಧ್ಯಕ್ಷತೆಯಲ್ಲಿ ದೊಡ್ಡ ವಿಜಯದ ಮಾತು ಹೇಗಿದ್ದರೂ, ಅನಾವಶ್ಯಕವಾದ ಅಪಜಯ ಮಾತ್ರ ಉಂಟಾಗಲಾರದು. ಚಿತ್ರಗ್ರೀವ ರಾಜನು ಈ ಸಂಗತಿಯನ್ನು ತಿಳಿದವನಾದುದರಿಂದಲೇ ಯೋಗ್ಯತೆಯುಳ್ಳವನನ್ನೇ ಸೇನಾಧ್ಯಕ್ಷ ಪದವಿಗೆ ಆರಿಸಿಕೊಂಡನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದಕೊಂಬೆಯಲ್ಲಿ ನೇತಾಡಿತು.





# ಮರದ ಮೇಲಿನಿಂದ

**ಒಂ**ದು ಊರಿನಲ್ಲಿ ನಾಗಭೂಷಣನೆಂಬವನಿಗೆ, ಏನೋವಿಧವಾಗಿ ಏನೇನೋ ಕಷ್ಟಗಳೂ ನಷ್ಟಗಳೂ ಬರತೊಡಗಿದುವು. ಬೇಡದ ಕೆಲಸಗಳನ್ನೇನೂ ಅವನು ಮಾಡಲಿಲ್ಲ. ಹೆಂಡತಿಗೆ ಕಾಯಿಲೆ ಬಂದಾಗ ಔಷಧ ಚಿಕಿತ್ಸೆಗಳಿಗಾಗಿ ತುಂಬಾ ಹಣ ಖರ್ಚಾಯಿತು. ಪ್ರಾಯಕ್ಕೆ ಬಂದ ಮಗಳಿಗೆ ಮದುವೆ ಮಾಡುವಾಗ ಬಹಳ ಹಣ ಬೇಕಾದುದರಿಂದ ಸಾಲ ಮಾಡಿದನು. ಸಾಲ ಬಡ್ಡಿಯೊಂದಿಗೆ ಏರಿ ಕುಳಿತಿತು. ತನ್ನ ಹೊಲಗದ್ದೆಗಳ ಮೇಲೆ ತುಂಬಾ ನಂಬುಗೆಯಿಟ್ಟಿದ್ದ ಅವನಿಗೆ, ಮಳೆ ಸರಿಯಾಗಿ ಬಾರದ್ದರಿಂದಲೂ, ಹುಳುಗಳ ಹಾವಳಿಯಿಂದಲೂ ಬೆಳೆ ನಷ್ಟವಾಗುತ್ತಾ ಹೋಯಿತು. ಸಾಲದವರು ಎಲ್ಲವನ್ನೂ ಮಾರಿ ಯಾದರೂ ಸಾಲ ತೀರಿಸಿ ಸಾಯುಬಾರದೇ ಎಂದು ಕುತ್ತಿಗೆಯನ್ನು ಒತ್ತತೊಡಗಿದರು. ಹಾಗೆ ಮಾಡಿದರೆ ಬಿಕಾರಿಯಾಗಬೇಕಷ್ಟೆ ?

ಈ ಕಷ್ಟಗಳು ಪರಿಹಾರವಾಗುವ ಮಾರ್ಗ ಬೇರೆ ಯಾವುದೂ ಇಲ್ಲವೆಂದು ನಾಗಭೂಷಣನಿಗೆ ತೋರಿದ್ದರಿಂದ, ಕಡೆಗೆ ಆತ್ಮಹತ್ಯ ಮಾಡಿಕೊಳ್ಳಲು ಸಿದ್ಧನಾದನು. ಒಂದುದಿನ ಮಧ್ಯ ರಾತ್ರಿಯಲ್ಲಿ ಅವನು ಮನೆಯ ಹಿಂಬದಿಯಲ್ಲಿರುವ ಹೋಗೆ ಮರದಕೊಂಬೆಗೆ ಹಗ್ಗ ಹಾಕಿ ಉರುಳಿನೊಳಗೆ ಕುತ್ತಿಗೆ ಹಾಕುವ ಮೊದಲು, ಅವನಿಗೆ ಒಮ್ಮೆ ದೇವರನ್ನು ಪ್ರಾರ್ಥಿಸಬೇಕೆಂದು ತೋರಿತು.

"ಓ ! ಭಗವಂತಾ ! ಬರುವ ಜನ್ಮದಲ್ಲಾದರೂ ನನ್ನನ್ನು ಭಾಗ್ಯವಂತನಾಗಿ ಸೃಷ್ಟಿಸು !" ಎಂದು ಎರಡು ಕೈಗಳನ್ನೂ ಎತ್ತಿ ಆಕಾಶ ನೋಡುತ್ತಾ ಕಣ್ಣುಮುಚ್ಚಿ ಪ್ರಾರ್ಥಿಸಿದನು. ಆಗ ಮರದ ಮೇಲಿನಿಂದ ಬಿದ್ದಹಾಗೆ ಅವನ ಕಾಲಿನ ಹತ್ತಿರ ಒಂದು ಗಂಟು ಧೊಮ್ಮನೆ ಬಿದ್ದಿತು. ಅದು ಬಿದ್ದ ಕೂಡಲೇ ನಾಗಭೂಷಣನು ಆ ಗಂಟನ್ನೆತ್ತಿಕೊಂಡು ಅದರೊಳಗೆ ಏನಿದೆಯೆಂದು ನೋಡಿದನು. ಆ ಗಂಟಿನೊಳಗೆ ತುಂಬಾ ಚಿನ್ನದ ನಾಣ್ಯಗಳು !

"ಕೊನೆಗೂ ನನ್ನ ಮೊರೆ ಭಗವಂತನ ಕಿವಿಗೆ ಬಿತ್ತು" ಎಂದುಕೊಂಡು ನಾಗಭೂಷಣನು ಗಂಟನ್ನು ಎತ್ತಿಕೊಂಡು ಮನೆಯೊಳಗೆ ಹೋಗಿ ಹೆಂಡತಿ ಯನ್ನು ಎಬ್ಬಿಸಿ ನಡೆದ ಸಂಗತಿಯನ್ನು ಹೇಳಿದನು. "ನೋಡಿದಿರಾ ! ಒಳ್ಳೆಯವರಿಗೆ ಭಗವಂತನು ಯಾವಾಗಲೂ ಒಳ್ಳೇದನ್ನೇ ಮಾಡುತ್ತಾನೆ."



ಎಂದು ಹೇಳಿ ಅವನ ಹೆಂಡತಿ, ನಾಣ್ಯಗಳನ್ನು ಕಣ್ಣಿಗೆ ಒತ್ತಿಕೊಂಡು, ಪೆಟ್ಟಿಗೆಯೊಳಗೆ ಇಟ್ಟಳು.

ಅಂದಿನಿಂದ ನಾಗಭೂಷಣನ ದಾರಿದ್ರ್ಯವವು ತೀರಿಹೋಗ ತೊಡಗಿತು. ಸಾಲಗಳನ್ನೆಲ್ಲಾ ತೀರಿಸಿದನು. ಇನ್ನಿಷ್ಟು ಹೊಲಗದ್ದೆಗಳನ್ನು ಕೊಂಡುಕೊಂಡು ಬದುಕು ಸಾಗಿಸ ತೊಡಗಿದನು.

ದಿನಗಳು ಕ್ರಮಿಸಿದಂತೆ ನಾಗಭೂಷಣನಿಗೆ ಇನ್ನೊಂದು ಉಪದ್ರವ ಇದಿರಾಗ ತೊಡಗಿತು. ತಂದೆಯ ಹತ್ತಿರ ಬೇಕಾದಷ್ಟು ಹಣ ಸೇರಿಬಿಟ್ಟುದರಿಂದ ಅವನ ಹಿರಿಯ ಮಗನು ಪೋಕರಿಗಳ ಸಹವಾಸ ಮಾಡುತ್ತ ಜೂಜಿನ ಮನೆಗಳಲ್ಲಿ ಹೊತ್ತು ಕಳೆಯತೊಡಗಿದನು. ಬುದ್ಧಿ ನೀತಿ ಹೇಳಿದ್ದು ಯಾವುದೂ ಅವನ ತಲೆಗೇರಲಿಲ್ಲ.

ಒಂದುದಿನ ಜೂಜಿನ ಮನೆಯಲ್ಲಿ ದೊಡ್ಡ ಗಲಾಟೆ ಯೆದ್ದಿತು. ಆ ಗಲಾಟೆಯಲ್ಲಿ ನಾಗಭೂಷಣನ ಮಗನು ಹೊಡೆದ ಪೆಟ್ಟಿನಿಂದ, ಆ ಊರಿನ ರತ್ನ ವರ್ತಕನ ಮಗನು ಬೋದತಪ್ಪಿ ಬಿದ್ದನು. ಅವನು ಬದುಕಲಾರನೆಂದೇ ಎಲ್ಲರಿಗೂ ತೋರಿತು.

ಈ ಸಂಗತಿ ತಿಳಿದು ನಾಗಭೂಷಣನಿಗೆ ಏನು ಮಾಡಬೇಕೆಂದು ತೋರಲಿಲ್ಲ. ಮಗನಿಗೆ ಮರಣ ಶಿಕ್ಷೆ ಬಿದ್ದುಬಿಟ್ಟರೆ, ಪುತ್ರವಿಯೋಗ ದುಃಖದ ಮೇಲೆ ಹಂತಕನ ತಂದೆ ಎಂದು ಎಲ್ಲರೂ ಅವಮಾನಿಸುತ್ತಾರೆ. ಊರೊಳಗೆ ಮುಖವೆತ್ತಿ ತಿರುಗಲು ಸಾಧ್ಯವಿಲ್ಲದೆ ಹೋಗುತ್ತದೆ. ಬದುಕಿರುವ ವರೆಗೂ ಈ ಅವಮಾನದ ಭಾರ ಹೊತ್ತುಕೊಂಡು ಕೊಳೆಯುತ್ತಾ ಹೋಗಬೇಕಾಗುತ್ತದೆ.

ಇದಕ್ಕಿಂತ ಸಾಯುವುದೇ ಮೇಲು ಎಂದು ನಿಶ್ಚಯಿಸಿ ನಾಗಭೂಷಣನು ಈ ಮೊದಲಿನಂತೆ, ಮಧ್ಯರಾತ್ರಿಯಲ್ಲಿ ಎದ್ದು ಹೊಂಗೇಮರದ ಬುಡಕ್ಕೆ ಹೋಗಿ, ಕೊಂಬೆಗೆ ಹಗ್ಗ ಹಾಕಿ, "ಓ! ದೇವರೇ! ನನ್ನ ಮಗನಿಗೆ ಕೊಲೆಗಾರನೆಂಬ ಹೆಸರು ಬರುತ್ತದೆ. ಬರುವ ಜನ್ಮದಲ್ಲಾದರೂ ನನಗೆ ಒಳ್ಳೆಯ ಬುದ್ಧಿಯುಳ್ಳ ಮಗನನ್ನು ಕೊಡಪ್ಪಾ" ಎಂದನು.

ಆ ಸಮಯದಲ್ಲಿ ಮರದಕೊಂಬೆಯ ಮೇಲಿನಿಂದ ಒಂದು ಧ್ವನಿ ಹೊರಟಿತು: "ಆ ರತ್ನವರ್ತಕನ ಮಗ ಏನೂ ಇಲ್ಲದೆ ಚೆನ್ನಾಗಿಯೇ ಇದ್ದಾನೆ! ಬರೀ ನಿನ್ನ ಭ್ರಮೆ! ಹೋಗಿ ನೋಡು"

ಈ ಶಬ್ದವನ್ನು ಕೇಳಿ ನಾಗಭೂಷಣನು ಆತ್ಯಾಶ್ಚರ್ಯಪಡುತ್ತ, ಮರದಕೊಂಬೆಗಳ ಕಡೆಗೆ ಪರೀಕ್ಷಿಸಿ ನೋಡಿದನು. ಏನೂ ಕಾಣಿಸಲಿಲ್ಲ.

ಬೆಳಗಾದ ಕೂಡಲೇ ಅವನು ಮನೆಯಿಂದ ಸೀದಾ ರತ್ನವರ್ತಕನ ಮನೆಗೆ ಹೋದನು. ಅಲ್ಲಿ ಆ ವ್ಯಾಪಾರಿಯ ಮಗನು ಮೈತುಂಬಾ ಕಟ್ಟುಗಳೊಂದಿಗೆ ಮಂಚದಲ್ಲಿ ಮಲಗಿರುವುದನ್ನು ನೋಡಿದನು. ಅವನ ತಂದೆ ತಾಯಿ ಬಳಗದವರು ದಿಗಿಲಿನಿಂದ ಸುತ್ತಲೂ ಕುಳಿತಿದ್ದರು. ಅದನ್ನು ನೋಡಿದ ಕೂಡಲೇ ನಾಗಭೂಷಣನು

ಕೋಪದಿಂದ ರತ್ನವರ್ತಕನನ್ನು ನೋಡಿ, ಅವನೇನೋ ಕೋಪದಿಂದ ಬಯ್ಯಲು ಬಾಯಿ ತೆರೆಯುವುದರೊಳಗೆ, "ಏನಯ್ಯಾ ಇದು? ಈ ಕಪಟನಾಟಕ ನಿಮಗೆ ನ್ಯಾಯವೇ? ನನ್ನ ಮೇಲೆ ನಿಮಗೇನಾದರೂ ಹಗೆ ಇದ್ದರೆ, ಬೇರೆ ವಿಧವಾಗಿ ತೀರಿಸಿಕೊಳ್ಳಲು ದಾರಿ ಕಾಣಲಿಲ್ಲವೆ? ನನ್ನ ಮಗನ ಮೇಲೆ ಇಂತಹ ಸುಳ್ಳು ಆರೋಪಣೆ ಮಾಡುವುದೆಂದರೇನು? ನಿಮ್ಮ ಮಗನಿಗೆ ಏನಾಗಿದೆ? ಅವನ ಈ ವೇಷದ ಕಟ್ಟುಗಳನ್ನೆಲ್ಲ ಬಿಚ್ಚಿರಿ. ಸುಮ್ಮ ಸುಮ್ಮನೆ ಇವನನ್ನು ನನ್ನ ಮಗನು ಹೊಡೆದನೆಂದು ಊರೆಲ್ಲಾ ಹೇಳುವುದೆಂದರೇನ್ರೀ ಇದು?" ಎಂದನು.

ರತ್ನವರ್ತಕನು ಏನೋ ಹೇಳಲಿಕ್ಕಿರಲು, ಅವನ ಮಗನು ತಟಕ್ಕನೆ ಎದ್ದು ಕುಳಿತು, "ಏನಿದು ನನ್ನ ಮೇಲೆಲ್ಲಾ ಹೀಗೆ ಕಟ್ಟುಗಿಟ್ಟು ಮದ್ದುಗಿದ್ದು ಎಲ್ಲಾ! ಎಂಥ ಗಲಾಟೆ, ಸರಿಯಾಗಿ ನಿದ್ದೆ ಮಾಡಲಿಕ್ಕೂ ಬಿಡದೆ?" ಎಂದು ಮೈಮೇಲಿನ ಕಟ್ಟುಗಳನ್ನು ಕಿತ್ತು ಕಿತ್ತು ಬಿಸಾಡಿದನು.

ಅವನ ಮೈ ಮೇಲೆ ಯಾವ ಗಾಯದ ಗುರುತುಗಳೂ ಕಾಣಲಿಲ್ಲ. ಎಲ್ಲರೂ ಅತ್ಯಾಶ್ಚರ್ಯದಿಂದ ಮುಖ ಮುಖ ನೋಡಿಕೊಂಡರು. ಮಾಯವೋ ಹಗಲು ಗನಸೋ ಎಂದುಕೊಂಡು ರತ್ನವರ್ತಕನು ಕಣ್ಣುಜ್ಜಿಕೊಳ್ಳುತ್ತಿರಲು, ಅವನ ಹೆಂಡತಿ ಚೆನ್ನಾಗಿರುವ ಮಗನನ್ನು ತಬ್ಬಿ, ಪೂಸಿ ಏನೇನೋ ಮುದ್ದು ಮಾಡಿದಳು.

"ಮಾಯವೋ ಮಂತ್ರವೋ ಏನೋ ನಮಗಾಯಿತು. ಏನಾದರೂ ನಮ್ಮ ಮಗ ನಮಗೆ ದಕ್ಕಿದ್ದಾನೆ. ಬಹುಶಃ ನಾಗಭೂಷಣರೇ ಗುಣಪಡಿಸಿಬಿಟ್ಟರು. ಅಯ್ಯಾ, ನಾಗಭೂಷಣರೆ! ನಿಮಗೆ ನಾನು ಋಣಿಯಾಗಿದ್ದೇನೆ. ಕ್ಷಮಿಸಿ" ಎಂದು ಹೇಳಿಕೊಂಡನು ರತ್ನವರ್ತಕ.



ನಾಗಭೂಷಣನು ತೃಪ್ತಿಯಾಗಿ ಮನೆಗೆ ಹೊರಟು ಹೋದನು. ಈ ಸಂಗತಿ ನಡೆದ ಮೇಲೆ ಅವನ ಮಗನು ತುಂಬಾ ಬುದ್ಧಿವಂತನಾಗಿ ಪ್ರವರ್ತಿಸತೊಡಗಿದನು. ಹೀಗೆ ಕೆಲವು ತಿಂಗಳು ಕಳೆದ ಮೇಲೆ ನಾಗಭೂಷಣನಿಗೆ ಒಂದು ಹೊಸ ಆಲೋಚನೆ ಬಂತು. ತಾನು ಧನಿಕನಾಗಿರುವುದೇನೋ ನಿಜ. ಆದರೆ ಕೋಟೀಶ್ವರನೇನಲ್ಲ. ತಲೆತಲಾಂತರದ ವರೆಗೆ ತನ್ನ ವಂಶ ಸುಖಸಂಪತ್ತಿನಿಂದ ಇರಬೇಕಾದರೆ ಒಂದೇ ಒಂದು ದಾರಿ ಮಾತ್ರವೇ ಇದೆ. ಮನೆ ಹಿಂದಿನ ಹೊಂಗೇಮರದ ಹತ್ತಿರ ಹೋಗಿ ಮತ್ತೊಂದುಸಾರಿ ಆತ್ಮಹತ್ಯೆಯ ಪ್ರಯತ್ನ ಮಾಡುವುದೇ! ಆ ಪ್ರಯತ್ನದಿಂದ ತನಗೆ ಎರಡು ಸಾರಿ ಒಳಿತೇ ಆಗಿದೆಯಷ್ಟೆ?

ಹೀಗೆ ಆಲೋಚಿಸಿ ನಾಗಭೂಷಣನು ನಡುರಾತ್ರಿಯಲ್ಲಿ ನೇಣು ಹಿಡಿದುಕೊಂಡು ಆ ಮರದ ಬಳಿಗೆ ಹೋದನು. ಹೋದದ್ದೇ ತಡ, ಅವನ ಮುಂದೆ

ಒಂದು ಬ್ರಹ್ಮರಾಕ್ಷಸನಂಥವನು ದಢಾಲ್ಲನೆ ಹಾರಿ ನಿಂತು, "ಮತ್ತೇಕೆ ಬಂದೆಯೋ ?" ಎಂದು ಹೂಂಕರಿಸಿದನು.

ನಾಗಭೂಷಣನಿಗೆ ನಾಲಗೆಯೇ ಏಳಲಿಲ್ಲ. ಅತಿ ಕಷ್ಟದಿಂದ ಬಾಯಿ ಚಪ್ಪರಿಸುತ್ತ—"ಯಾರು ನೀವು ?" ಎಂದನು.

"ಸಾಯಲು ಬಂದಿರುವ ನೀನು ನನ್ನನ್ನು ನೋಡಿ ಹೆದರುವುದೇಕೆ ? ನೋಡಿದರೆ ತಿಳಿಯುವುದಿಲ್ಲವೇ ? ನಾನು ಬ್ರಹ್ಮರಾಕ್ಷಸ. ಅನೇಕ ವರ್ಷಗಳಿಂದ ಈ ಮರದ ಮೇಲೆ ಇದ್ದೇನೆ. ನೀನು ಈಗ ಆತ್ಮಹತ್ಯ ಮಾಡಿಕೊಳ್ಳದಿದ್ದರೆ ನಾನು ಈ ಭಯಂಕರ ರೂಪದಿಂದ ವಿಮುಕ್ತನಾಗಿ ಸ್ವರ್ಗಕ್ಕೆ ಹೋಗುತ್ತೇನೆ. ಅದಕ್ಕೇ ಈ ಮೊದಲು ಎರಡು ಸಾರಿ ನಿನ್ನನ್ನು ಸಾಯದಂತೆ ಕಾಪಾಡಿದೆನು" ಎಂದನು ಬ್ರಹ್ಮರಾಕ್ಷಸ. ಆ ಮಾತು ಕೇಳಿ ನಾಗಭೂಷಣನ ಭಯ ಹೋಯಿತು. ಬ್ರಹ್ಮರಾಕ್ಷಸನಿಂದ ಇನ್ನಿಷ್ಟು ಸಹಾಯ ಹೊಂದಬಹುದೆಂಬ ಆಸೆಯೂ ಚಿಗುರಿಸಿಕೊಂಡಿತು. "ನನ್ನ ಆತ್ಮಹತ್ಯಕ್ಕೂ ನಿಮ್ಮ ಸ್ವರ್ಗ ಪ್ರಾಪ್ತಿಗೂ ಏನು ಸಂಬಂಧವೋ ಗೊತ್ತಾಗಲಿಲ್ಲ" ಎಂದ ನಾಗಭೂಷಣ.

ಆ ಮಾತು ಕೇಳಿ ಬ್ರಹ್ಮರಾಕ್ಷಸನು ದೊಡ್ಡದೊಂದು ಉಸಿರುಬಿಟ್ಟು, "ಭಗವಂತನು ಮನುಷ್ಯನಿಗೆ ಸ್ವಲ್ಪ ಆಯುಷ್ಯವನ್ನು ಕೊಟ್ಟು, ಧೈರ್ಯದಿಂದ ಬದುಕಲು ಹೇಳುತ್ತಾನೆ. ಮನುಷ್ಯನು ಕಷ್ಟಗಳು ಬಂದರೆ ಧೈರ್ಯದಿಂದ ಇದಿರಿಸಬೇಕೇ ಹೊರತು ಆತ್ಮಹತ್ಯದಂತಹ ಬೇಡದ ಕೆಲಸಕ್ಕೆ ತಲೆಹಾಕಬಾರದು. ನಾನು ನಿನ್ನ ಪೂರ್ವಿಕನೇ. ಕಷ್ಟಗಳನ್ನು ತಾಳಲಾಗದೆ ಆತ್ಮಹತ್ಯ ಮಾಡಿಕೊಂಡು, ಆ ಪಾಪದ ಫಲಿತವಾಗಿ ಬ್ರಹ್ಮರಾಕ್ಷಸನಾದೆನು. ನನ್ನ ವಂಶದಲ್ಲಿ ನನ್ನ ನಂತರ ಐದು ತಲೆಯವರವರೆಗೂ ಯಾರೂ ಆತ್ಮಹತ್ಯೆ ಮಾಡಿಕೊಳ್ಳದೇ ಹೋದರೆ ನನ್ನ ಪಾಪವು ನಶಿಸಿ, ನನಗೆ ಸ್ವರ್ಗ ಪ್ರಾಪ್ತಿಯಾಗುತ್ತದೆ. ನನ್ನ ವಂಶದ ಯಾರಿಗಾದರೂ ಎರಡುಸಾರಿ ಮಾತ್ರ ಸಹಾಯ ಮಾಡಬಲ್ಲೆನು. ಈಗ ನೀನು ನನ್ನ ವಂಶದಲ್ಲಿ ಐದನೇ ತಲೆಯವನು. ಎರಡುಸಾರಿ ನಿನಗೆ ಸಹಾಯ ಮಾಡಿದ್ದಾಯಿತು. ಈಗ ನೀನು ಆತ್ಮಹತ್ಯ ಮಾಡಿಕೊಂಡು, ಬ್ರಹ್ಮರಾಕ್ಷಸನಾಗಿ ನನ್ನ ಜತೆಯಲ್ಲಿ ಇರುವಿಯಾದರೆ ಸರಿ, ಅಥವಾ ಆಯುಷ್ಯವಿರುವಷ್ಟರ ವರೆಗೆ ಧೈರ್ಯವಾಗಿ ಜೀವಿಸಿದ್ದು ನನ್ನನ್ನು ಸ್ವರ್ಗದಲ್ಲಿ ಸೇರಿಕೊಂಡರೂ ಸರಿಯೆ !" ಎಂದು ಹೇಳಿ ಮರದ ಮೇಲಕ್ಕೆ ಹಾರಿಹೋದನು.

ನಾಗಭೂಷಣನು ಆ ಮೇಲೆ ಎಂದಿಗೂ ಆತ್ಮಹತ್ಯೆಯ ಪ್ರಯತ್ನ ಮಾಡಲೇ ಇಲ್ಲ.





# ಶಾಂತಿದೇವತೆ

**ಪೂ**ರ್ವಕಾಲದಲ್ಲಿ ಅನೇಕರು ಕತ್ತಿಯನ್ನು ಆಶ್ರಯಿಸಿ ಕೊಂಡು, ಜೀವನ ನಡೆಸಿಕೊಂಡಿದ್ದರು. ಅಂದರೆ ಕೈಯಲ್ಲಿ ಕತ್ತಿಯನ್ನು ಹಿಡಿದು ಯುದ್ಧದಲ್ಲಿ ಭಾಗ ವಹಿಸಿ ಆ ಮೂಲಕವಾಗಿ ಬದುಕು ಸಾಗಿಸಿ ಕೊಂಡಿದ್ದರು. ಗಂಡಸರಿಗೆಲ್ಲಾ ಮುಖ್ಯವಾದ ಕೆಲಸ ಯುದ್ಧ ವೃತ್ತಿಯೇ ಆಗಿತ್ತು. ಆ ಯುಧಗಳ ಅಭ್ಯಾಸವು ವಿದ್ಯಾಭ್ಯಾಸದ ಒಂದು ಭಾಗವಾಗಿತ್ತು.

ಆ ರೀತಿಯಾಗಿ ಶೂರಸೇನನೆಂಬವನು ಅನೇಕ ಯುದ್ಧಗಳಲ್ಲಿ ಪಾಲುಗೊಂಡು ವೀರಸಾಹಸಗಳನ್ನು ಮಾಡುವುದರಲ್ಲಿ ಬಲು ಜಾಣನಾಗಿದ್ದನು. ಹೀಗಿರುವಾಗ ಇದ್ದಕ್ಕಿದ್ದ ಹಾಗೆ ಯಾವ ಕೆಲಸವೂ ಇಲ್ಲದೆ ಹೋಗುವ ಸ್ಥಿತಿ ಬಂದರೆ ಅವನ ಗತಿ ಹೇಗಾಗಬೇಡ ! ಅದಕ್ಕೆ ಕಾರಣವೇನೆಂದರೆ, ಎಲ್ಲಾ ರಾಜರಿಗೂ ಯುದ್ಧದ ಮೇಲೆ ಬೇಸರ ಹುಟ್ಟಿ ಶಾಂತಿ ಸಮಾವೇಶವನ್ನು ನಡೆಸಿ, ಶಾಂತಿ ಒಪ್ಪಂದ ಮಾಡಿಕೊಂಡು ಅಸ್ತ್ರಶಸ್ತ್ರಗಳನ್ನೆಲ್ಲಾ ಮೂಲೆಗೆ ಸೇರಿಸಿಬಿಟ್ಟರು. ಯುದ್ಧದ ಗೊಡವೆ ಇಲ್ಲದೆ ರಾಜ್ಯಗಳೆಲ್ಲ ಪ್ರಶಾಂತವಾಗಿದ್ದುವು. ಸೈನಿಕರಿಗೂ ಒಳ್ಳೆಯ ಆರಾಮ. ಪ್ರಜೆಗಳಿಗೂ ನಿಶ್ಚಿಂತೆ.

ಇದರಿಂದಾಗಿ ಮಹಾ ವೀರನಾದ ಶೂರಸಿಂಹನಿಗೆ ದೊಡ್ಡ ಸಮಸ್ಯೆ ಇದಿರಾಯಿತು. ಕೈಯಲ್ಲಿ ಕತ್ತಿ ಹಿಡಿಯುವುದೊಂದೇ ಅವನಿಗೆ ತಿಳಿದ ವಿದ್ಯೆ. ಎಷ್ಟು ತಲೆಗಳನ್ನಾದರೂ ಲೀಲಾಜಾಲವಾಗಿ ಕಡಿದುರುಳಿಸಿ ಬಿಡಬಲ್ಲವನು. ಅಂಥವನಿಗೆ ಈಗ ಯುದ್ಧದ ಕೆಲಸವೇ ಇಲ್ಲ. ಬೇರೆ ಕೆಲಸ ನೋಡಿ ಕೊಳ್ಳಲು ಅಭ್ಯಾಸವೂ ಇಲ್ಲ. ಹಾಗಾದರೆ ಅವನಿಗೆ ಬದುಕುವ ದಾರಿ ಹೇಗೆ ?

"ರಾಜ ಮಹರಾಜರೆಲ್ಲಾ ಇಷ್ಟು ಹೇಡಿಗಳಾಗಿ ಹೋದರೇಕೆ ? ರಾಜರ ಹಾಗೆಯೇ ಪ್ರಜೆಗಳೂ ಪೌರುಷಹೀನರಾದರು. ನನ್ನ ಕತ್ತಿ ಮೂಲೆಗೆ ಸೇರಲೇಬೇಕೇನು ? ಅದಕ್ಕೆ ತುಕ್ಕು ಹಿಡಿಯುವುದನ್ನು ನನ್ನ ಕಣ್ಣುಗಳಿಂದ ಹೇಗೆ ನೋಡಿ ಸಹಿಸಿ ಕೊಂಡಿರಲಿ ?"

ಅಂತೂ ಕೆಲಸವೇನಿಲ್ಲದ ಶೂರಸಿಂಹನು ಹೊಟ್ಟೆ ಬಟ್ಟೆಗಳಿಗಿಲ್ಲದೆ ಕೃಶನಾಗ ತೊಡಗಿದನು. ಹುಲ್ಲು ದಾಣೆ, ಸರಿಯಾದ ವ್ಯಾಯಾಮಗಳಿಲ್ಲದೆ ಅವನ ಕುದುರೆಯೂ ಕೃಶವಾಗ ತೊಡಗಿತು. ಅದನ್ನು ನೋಡಿ ಅವನ ಚಿಂತೆ ಇಮ್ಮಡಿಸಿತು.

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಬೇರೆ ಉಪಾಯಗಾಣದೆ ಶೂರಸಿಂಹನು ಉದ್ಯೋಗ ಹುಡುಕುತ್ತಾ ತಿರುಗಲು ಹೊರಟನು.

ಹೀಗೆ ಹೋಗುತ್ತಾ ಅವನು ಒಂದು ದಿನ ಬೆಳಗ್ಗಿನ ಹೊತ್ತಿನಲ್ಲಿ ಒಂದು ಗದ್ದೆಯ ಹತ್ತಿರ ತಲಪಿದನು. ಆ ಗದ್ದೆಯಲ್ಲಿ ಉಳುಮೆ ಮಾಡಿ ಕೊಂಡಿದ್ದ ರೈತನನ್ನು ನೋಡಿ ಶೂರಸಿಂಹನು ತನ್ನ ಕುದುರೆಯ ಮೇಲಿದ್ದೇ, "ಎಹೇಯ್" ಎಂದು ಅವನನ್ನು ಕೂಗಿ, "ನನ್ನ ಹೆಸರು ಶೂರಸಿಂಹ. ಕೇಳಿಸಿತೇನೋ ? ನಾನು ದೊಡ್ಡ ಯುದ್ಧವೀರ. ಈಗ ನನಗೆ ಯಾವ ಕೆಲಸವೂ ಇಲ್ಲ. ನನಗೇನಾದರೂ ಕೆಲಸ ತೋರಿಸಬಲ್ಲೆಯಾ ? ಈ ಊರಲ್ಲಿ ಏನಾದರೂ ನನಗೆ ತಕ್ಕ ಕೆಲಸವಿದೆಯೇ ?" ಎಂದು ಪ್ರಶ್ನೆ ಮಾಡಿದನು.

ಅವನ ಮಾತು ಕೇಳಿ ರೈತನು ಉಳುವುದನ್ನು ನಿಲ್ಲಿಸಿ ಶೂರಸಿಂಹನನ್ನು ಸುಮ್ಮನೆ ಸ್ವಲ್ಪ ನೋಡಿದನು. ಒರೆಯಲ್ಲಿ ಕತ್ತಿ ನೇತಾಡಿಸಿಕೊಂಡಿರುವ ಆ ವೀರನ ದರ್ಪದ ರೀತಿ ನೋಡಿ ಮನಸ್ಸಿನಲ್ಲಿ ಸ್ವಲ್ಪ ಭಯವೂ ರೈತನಿಗಾಯಿತು. ಅವನ ಕಳೆಗುಂದಿದ ಮುಖವನ್ನು ನೋಡಿ ಕರುಣೆಯೂ ಉಂಟಾಯಿತು. ಒಂದು ವೇಳೆ ಬುದ್ಧಿ ಸರಿಯಿಲ್ಲವೇನೋ ಎಂಬ ಸಂದೇಹವೂ ಎದ್ದಿತು.

"ನೇಗಿಲು ಹಿಡಿಯುವ ಕೆಲಸ ಮಾಡುವಿರಾದರೆ ನನ್ನ ಹತ್ತಿರ ಕೆಲಸವಿದೆ. ಮೊದಲು ಆ ಕತ್ತಿ ಢಾಲು ಕಠಾರಿಗಳನ್ನೆಲ್ಲಾ ದೂರ ಹಾಕಿ ಬರುವಿರಾ ?" ಎಂದನು ರೈತ.

ಅದನ್ನು ಕೇಳಿ ಶೂರಸಿಂಹನು, "ನೇಗಿಲು ಹಿಡಿಯುವುದೇ ? ಆ ಕೆಲಸ ನನಗೇನು ಗೊತ್ತಿದೆ? ನಿನಗೆ ಶತ್ರುಗಳಾರಾದರೂ ಇದ್ದರೆ ಹೇಳು. ನಿಮಿಷ ಮಾತ್ರದಲ್ಲಿ ಅವರ ತಲೆಗಳನ್ನು ಕಡಿದು ನಿನ್ನ ಎದುರಿಗೆ ಹಾಕುತ್ತೇನೆ. ಪ್ರತಿಫಲವಾಗಿ ನನಗೆ ಊಟವನ್ನೂ, ನನ್ನ ಕುದುರೆಗೆ ಇಷ್ಟು ದಾಣಿಯನ್ನೂ ಕೊಟ್ಟರೆ ಸಾಕು. ಮತ್ತೇನೂ ಬೇಡ" ಎಂದನು.

"ಅಂಥ ಶತ್ರುಗಳಾರೂ ನನಗೆ ಇಲ್ಲ ಮಾರಾಯಾ!" ಎಂದು ಹೇಳಿ ರೈತನು ಎಂದಿನಂತೆ ತನ್ನ ಉಳುವ ಕೆಲಸದಲ್ಲಿ ಮಗ್ನನಾದನು.

"ಛೀ ಛೀ ! ಪೌರುಷಹೀನರು ! ಮನುಷ್ಯನಾದವನಿಗೆ ಶತ್ರುವೇ ಇಲ್ಲವೆಂದರೇನು ? ಕೈಲಾಗದವರು! ಮನುಷ್ಯ ರೂಪದ ಬೊಂಬೆಗಳು ! ಶತ್ರುಸಂಹಾರಕವಾದ ನನ್ನ ಕೈಗಳಿಂದ ನೇಗಿಲು ಹಿಡಿಯಲು ಹೇಳುತ್ತಾನೆ. ಪುಕ್ಕಲು ಮನುಷ್ಯ ! ನನ್ನಂಥ ಯೋಧನು ಮಾಡುವ ಕೆಲಸವೋ ಇದು ?" ಎಂದುಕೊಂಡನು ಶೂರಸೇನ.

ಅಲ್ಲಿಂದ ಹೋಗುತ್ತಾ ಶೂರಸೇನನು ಅರಣ್ಯ ಮಾರ್ಗವನ್ನು ಹಿಡಿದನು. ಆ ಅರಣ್ಯದಾಚೆಗೆ ಹಚ್ಚಗಿನ ಮೈದಾನದಂತಹ ಸಾನುಭೂಮಿ ಕಂಡಿತು. ಆ ಮೈದಾನದಲ್ಲಿ ಎತ್ತರವಾದೊಂದು ದೇವತಾ ವಿಗ್ರಹ ವಿರುವುದನ್ನು ನೋಡಿದನು. ಅದು ಯುದ್ಧ



ದೇವತೆಯೇ ನಿಜ! ಶೂರಸೇನನು ಉತ್ಸಾಹದಿಂದ ಕುದುರೆಯನ್ನು ದೌಡಾಯಿಸಿಕೊಂಡು ಹೋಗಿ ಆ ವಿಗ್ರಹದ ಮುಂದೆ ನಿಂತನು.

ಆ ದೇವಿಯ ವಿಗ್ರಹವು ಇಪ್ಪತ್ತು ಅಡಿ ಎತ್ತರ ವಾಗಿದ್ದಿತು. ಬೆಂಕಿಯ ಕಿಡಿಗಳನ್ನು ಉದುರಿಸು ವಂತಹ ಕಣ್ಣುಗಳೂ, ಕೈಯಲ್ಲಿ ಬಿಚ್ಚುಗತ್ತಿಯೂ, ನೋಡುವವರನ್ನು ಹೆದರಿಸುವಂತಿದ್ದಿತು. ಆ ದೇವಿಯ ಕೈಯ ಕತ್ತಿಯನ್ನು ನೋಡಿ ಶೂರಸಿಂಹನಿಗೆ ಬಹಳ ಸಂತೋಷವಾಯಿತು. ಹೊಸತೊಂದು ಉತ್ಸಾಹವು ಉಕ್ಕಿ ಸೂಸಿತು.

"ಆಹಾ! ಎಂತಹ ವಿಗ್ರಹ! ಪೂರ್ತಿ ಚಿನ್ನದ ವಿಗ್ರಹ! ಏನು ದಿವ್ಯತೆ! ಎಂಥ ಭವ್ಯತೆ!" ಎಂದು ಗಟ್ಟಿಯಾಗಿ ಹೇಳಿದನು ಶೂರಸಿಂಹ.

"ಯಾರು ಇದನ್ನು ಚಿನ್ನವೆಂಬವರು? ಪೂರ್ತಿ ಬೆಳ್ಳಿ! ಇದು ಬರೀ ಬೆಳ್ಳಿಯ ವಿಗ್ರಹವೇ ಹೊರತು ಸ್ವರ್ಣವಿಗ್ರಹ ಅಲ್ಲವೇ ಅಲ್ಲ!" ಎಂದು ಅವನ ದನಿಗೆ ಮಾರ್ದನಿಯೊಂದು ಗಟ್ಟಿಯಾಗಿಯೇ ಕೇಳಿಸಿತು.

ಆ ಧ್ವನಿಯೊಂದಿಗೆ ವಿಗ್ರಹದ ಹಿಂಬದಿಯಿಂದ ಕತ್ತಿ ಢಾಲುಗಳೊಂದಿಗೆ ವೀರನಾಗಿ ಕಂಗೊಳಿಸುವ ಕುದುರೆಯ ರಾಹುತನೊಬ್ಬನು ಮುಂದೆ ಬಂದನು.

ಅವನನ್ನು ನೋಡಿದ ಕೂಡಲೇ ಶೂರಸಿಂಹನು ಪೌರುಷದಿಂದ ಹಲ್ಲು ಕಡಿದು, ಒರೆಯಿಂದ ಕತ್ತಿಯನ್ನು ಹಿರಿದನು.

"ಯಾರು ನೀನು ನನ್ನ ಮಾತನ್ನು ಧಿಕ್ಕರಿಸುವವನು? ಕೇಳಿರುವೆಯಾ ನನ್ನ ಹೆಸರು? ಶೂರಸಿಂಹನೆಂದರೆ ನಾನೇ!" ಎಂದು ಗರ್ಜಿಸಿದನು ಶೂರಸಿಂಹ.

ಎರಡನೇ ಯೋಧನು ಗೇಲಿಯಾಗಿ ನಕ್ಕು, ತನ್ನ ಕತ್ತಿಯನ್ನು ಆಕಾಶದಲ್ಲಿ ತಿರುಗಿಸುತ್ತ, "ಲೋ! ನೀನೊಬ್ಬ ಕಣ್ಣುಗೆಟ್ಟ ಕುರುಡನೇ ಸರಿ! ಬೆಳ್ಳಿಗೂ ಬಂಗಾರಕ್ಕೂ ವ್ಯತ್ಯಾಸ ತಿಳಿಯದ ನಿನ್ನೊಂದಿಗೆ ಯುದ್ಧಕ್ಕೆ ತಲೆ ಹಾಕುವುದೆಂದರೆ, ನನಗೆ ಅವಮಾನವೆನಿಸುತ್ತದೆ. ನನ್ನ ಹೆಸರೇನೆಂದು ನಿನಗೆ ಗೊತ್ತಿದೆಯೋ? ನಾನು ಧೀರಸಿಂಹ. ನನ್ನ ಕತ್ತಿಯ ರುಚಿ ನೋಡಬೇಕಿದ್ದರೆ ಬಾ ಮುಂದೆ!" ಎಂದು ತನ್ನ ಕುದುರೆಯ ಬೆನ್ನನ್ನು ಚಪ್ಪರಿಸಿದನು.

ಮರುಕ್ಷಣದಲ್ಲಿ ಆ ಯೋಧರಿಬ್ಬರೂ ಕೈ ಕೈ ಕಲೆತುಕೊಂಡರು. ಕತ್ತಿಗಳ ಖಣಖಣಾಟವೂ, ಕುದುರೆಗಳ ಹೇಷಾರವವೂ, ವೀರರ ಪೌರುಷ ವಾಕ್ಯಗಳೂ ಆ ಪ್ರದೇಶದಲ್ಲಿ ಎಡೆಬಿಡದೆ ಹೊರಟವು.

ಆಗ ಅಕಸ್ಮಾತ್ತಾಗಿ "ನಿಲ್ಲಿಸಿರಿ! ಒರೆಗಿಳಿಸಿರಿ ಕತ್ತಿಗಳನ್ನು!" ಎಂದು ತೀಕ್ಷ್ಣವಾದ ಸ್ತ್ರೀ ಕಂಠಧ್ವನಿಯೊಂದು ಮೊಳಗಿತು. ಯೋಧರಿಬ್ಬರೂ ಆ ಶಬ್ದ ಬಂದ ದಿಕ್ಕಿಗೆ ನೋಡಿದರು.

ಮಲ್ಲಿಗೆಯ ಹೂವಿನಂತಹ ಬೆಳ್ಳಂಬೆಳಗಿನ ಸೀರೆಯೊಂದಿಗೆ, ಶಾಂತರಸವನ್ನು ತುಳುಕಿಸುವ ಮುಖದಿಂದ ಸುಂದರಿಯೊಬ್ಬಳು ನಗುತ್ತಾ ಅವರ

ಮುಂದೆ ಬಂದು, "ಸಂದೇಹವೇನಿಲ್ಲ. ನೀವಿಬ್ಬರೂ ಮಹಾ ಯೋಧರೇ ನಿಜ. ಅಸಹಾಯ ಶೂರರೇ ನಿಜ" ಎಂದಳು.

"ಅವನ ಸಂಗತಿ ಇನ್ನೂ ಗೊತ್ತಾಗಿಲ್ಲ. ನನ್ನ ಹೆಸರೇ ಶೂರಸಿಂಹ" ಎಂದನು ಶೂರಸಿಂಹ.

"ಇವನ ಸಂಗತಿ ಇನ್ನೂ ತಿಳಿದಿಲ್ಲ. ನಾನು ಧೀರಸಿಂಹ" ಎಂದನು ಧೀರಸಿಂಹ.

"ನಿಮ್ಮಿಬ್ಬರ ಸಂಗತಿಯೂ ನನಗೆ ತಿಳಿಯಿತು. ನಿಮ್ಮಿಬ್ಬರ ಕತ್ತಿಗಳ ಹರಿತಗಳಲ್ಲಿ ಸ್ವಲ್ಪವಾದರೂ ನಿಮ್ಮ ಬುದ್ಧಿಗೆ ಹರಿತವಿರುತ್ತಿದ್ದರೆ ಇಂತಹ ಹೊಡೆದಾಟ ನಡೆಯುತ್ತಿದ್ದಿಲ್ಲ. ನೀವಿಬ್ಬರೂ ಒಂದೇ" ಎಂದಳು ಆ ಸುಂದರಿ.

"ಈ ಮೂರ್ಖನಿಗೆ ಸರಿಯಾದ ಕಣ್ಣಿಲ್ಲ. ಈ ವಿಗ್ರಹವು ಬೆಳ್ಳಿಯದಂತೆ" ಎಂದು ಶೂರಸಿಂಹನು ಪರಿಹಾಸವಾಗಿ ಹೇಳಿದನು.

"ಅವನದು ವಕ್ರದೃಷ್ಟಿ. ಬೆಳ್ಳಿಯ ವಿಗ್ರಹವನ್ನು ಬಂಗಾರದ್ದೆಂದು ವಾದಿಸುತ್ತಾನೆ. ಶುದ್ಧ ಅವಿವೇಕಿ!" ಎಂದು ಗೇಲಿಮಾಡಿದನು ಧೀರಸಿಂಹ.

ಆಗ ಆ ಯುವತಿ ಗಲಗಲನೆ ನಕ್ಕು ಆ ಯೋಧರಿಬ್ಬರನ್ನೂ ಕರೆದುಕೊಂಡು ವಿಗ್ರಹದ ಸುತ್ತಲೂ ತಿರುಗಿದಳು. ಬೆಳ್ಳಿಯದೆಂದು ವಾದ ಮಾಡಿದ ಧೀರಸಿಂಹನಿಗೆ ವಿಗ್ರಹದ ಒಂದು ಬದಿಯಲ್ಲಿ ಚಿನ್ನದ ಮೆರುಗು ಕೊಟ್ಟಿರುವುದು ಕಂಡಿತು. ವಿಗ್ರಹವು ಬಂಗಾರದ್ದೆಂದು ವಾದಿಸಿದ ಶೂರಸಿಂಹನಿಗೆ ಅದರ ಬೆಳ್ಳಿಯ ಮೆರುಗು ಕಾಣಿಸಿತು. ಅಂದರೆ ಅದು ಚಿನ್ನದ್ದೂ ಅಲ್ಲ ಬೆಳ್ಳಿಯದೂ ಅಲ್ಲ.

ಇಬ್ಬರೂ ಬೆಪ್ಪು ಬಡೆದವರಂತೆ ಒಬ್ಬರನ್ನೊಬ್ಬರು ನೋಡಿಕೊಂಡರು. ಅಷ್ಟರಲ್ಲಿ ಆ ಯುವತಿ ಅಂತರ್ಧಾನಳಾಗಿ ಹೋದಳು. ಅವರು ಅವಳನ್ನು ನಾಲ್ಕು ಸುತ್ತಲೂ ಹುಡುಕಿಕೊಂಡಿದ್ದಾಗ, ಒಂದು ದಿಕ್ಕಿನಿಂದ ಅವರ ಕಿವಿಗಳಿಗೆ ಈ ಕೆಳಗಿನ ಮಾತುಗಳು ಬಿದ್ದುವು:

"ಯೋಧರೇ! ನಾನು ಶಾಂತಿದೇವತೆ! ನೀವಿಬ್ಬರೂ ಮಹಾ ಯೋಧರು ನಿಜ. ಯಾವಾಗಲೂ ಮಾನವರಿಗೆ ಬೇಕಾದುದು ಶಾಂತಿಯೇ. ನೀವಿಬ್ಬರೂ ಕಾಲವನ್ನನುಸರಿಸಿ ಶಾಂತರಾಗಿ ಜೀವಿಸುವುದೇ ಒಳ್ಳೆಯದು."

ಶೂರಸಿಂಹ ಧೀರಸಿಂಹರು ಕುದುರೆಗಳ ಮೇಲಿನಿಂದ ಇಳಿದರು. ಒಬ್ಬರನೊಬ್ಬರು ಆಲಿಂಗಿಸಿಕೊಂಡರು. ಕತ್ತಿ ಢಾಲುಗಳನ್ನು ವಿಗ್ರಹದ ಮುಂದೆ ಹಾಕಿದರು. ಅಂದಿನಿಂದ ಅವರಿಬ್ಬರೂ ವ್ಯವಸಾಯ ವೃತ್ತಿಯನ್ನು ಕಲಿತು, ಪ್ರಶಾಂತವಾಗಿ ಜೀವನವನ್ನು ಸಾಗಿಸಿಕೊಂಡಿದ್ದರು. ಕಾಲಕ್ರಮದಲ್ಲಿ ಯುದ್ಧದ ವಿಷಯ ಅವರಿಗೆ ಮರೆತೇ ಹೋಯಿತು.





# ಶಾಂತಶೀಲವ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಅವನ ಕುಮಾರನಾಗಿ ಜನ್ಮ ತಾಳಿದನು. ಬ್ರಹ್ಮದತ್ತ ರಾಜನು ಅವನಿಗೆ ಶೀಲವನೆಂದು ಹೆಸರಿಟ್ಟಿದ್ದನು.

ಕಾಲಕ್ರಮದಲ್ಲಿ ಶೀಲವನು ಬೆಳೆದು ದೊಡ್ಡವನಾಗಿ ಕಾಶೀರಾಜ್ಯಕ್ಕೆ ರಾಜನಾಗಿ ನೀತಿ ತಪ್ಪದೆ ರಾಜ್ಯ ವಾಳಲು ತೊಡಗಿದನು. ಪ್ರಜೆಗಳೆಲ್ಲಾ ಅವನಿಗೆ ಸ್ವಂತ ಮಕ್ಕಳ ಹಾಗೆ ಕಾಣುತ್ತಿದ್ದರು. ದಾರಿದ್ರ್ಯ ದಿಂದಲೋ ಅಜ್ಞಾನದಿಂದಲೋ ಕಳ್ಳತನವೇ ಮೊದಲಾದ ತಪ್ಪುಗಳನ್ನು ಮಾಡಿ ಸಿಕ್ಕಿಬಿದ್ದವರಿಗೆ ಶೀಲವರಾಜನು ದಂಡನೆಗಳನ್ನೇನೂ ಕೊಡುತ್ತಿದ್ದಿಲ್ಲ. ಅವರನ್ನು ತನ್ನ ನಟ್ಟಿದಿರಿಗೆ ಕರೆಯಿಸಿ, ಅವರ ಜೀವನಕ್ಕೆ ಸಾಕಾಗುವಷ್ಟು ಹಣ ಕೊಟ್ಟು ಹಿತ ಬೋಧೆಗಳನ್ನು ಮಾಡಿ ಕಳುಹಿಸುತ್ತಿದ್ದನು. ಇದರಿಂದ ರಾಜ್ಯದಲ್ಲಿ ತಪ್ಪು ತಂಟೆಗಳು ತಗ್ಗುತ್ತಾ ಹೋದುದು ಮಾತ್ರವಲ್ಲದೆ, ಪ್ರಜೆಗಳಿಗೆ ತಮ್ಮ ರಾಜನ ಮೇಲೆ ಅಪಾರ ಭಕ್ತಿಗೌರವಗಳೂ ಬೆಳೆದುವು.

ಕಾಶೀರಾಜ್ಯದ ಸಮೀಪದಲ್ಲಿರುವ ಕೋಸಲದೇಶದ ಮಂತ್ರಿಗೆ, ಶಾಂತಗುಣದ ಶೀಲವರಾಜನ ಮೇಲೆ ಅಲ್ಪ ಭಾವನೆ ಹುಟ್ಟಿತು. ಆ ರಾಜ್ಯವನ್ನು ಸುಲಭ ವಾಗಿ ಗೆದ್ದು, ತಮ್ಮ ರಾಜ್ಯವನ್ನು ವಿಸ್ತರಿಸಬಹುದೆಂದು ಅವನಿಗೆ ತೋರಿತು, ಅವನು ತನ್ನ ರಾಜನೊಂದಿಗೆ, "ಕಾಶೀರಾಜ್ಯದ ರಾಜ ಶೀಲವನು ತೀರಾ ದುರ್ಬಲನು. ಅವನು ದಾರಿ ದೋಚುವ ಕಳ್ಳರನ್ನೂ ಕೊಲೆಗಾರರನ್ನೂ ದಂಡಿಸುವುದಕ್ಕೆ ಬದಲಾಗಿ ಸುಮ್ಮನೆ ಬಿಟ್ಟುಬಿಡುತ್ತಾನೆ. ಹೇಡಿಯೂ ಪುಕ್ಕನೂ ಆದ ಆ ರಾಜನನ್ನು ನಾವು ಸುಲಭವಾಗಿ ಜಯಿಸ ಬಹುದು." ಎಂದು ಹೇಳಿದನು.

ಮಂತ್ರಿಯ ಮಾತು ನಿಜವೋ ಸುಳ್ಳೋ ತಿಳಿದು ಕೊಳ್ಳಬೇಕೆಂದು ಕೋಸಲದ ರಾಜನು ತನ್ನ ಕೆಲವು ಸೈನಿಕರನ್ನು ಕರೆದು, "ನೀವು ಕಾಶೀರಾಜ್ಯದ ಗಡಿ ಯನ್ನು ದಾಟಿ ಒಳಗೆ ಪ್ರವೇಶಿಸಿ ಅಲ್ಲಿಯ ಗ್ರಾಮ ಗಳನ್ನು ಕೊಳ್ಳೆ ಹೊಡೆದುಕೊಂಡು ಬನ್ನಿರಿ" ಎಂದು ಆಜ್ಞೆ ಮಾಡಿದನು.

ಕೋಸಲದ ಸೈನಿಕರು ಕಾಶೀರಾಜ್ಯದ ಗ್ರಾಮಗಳ ಮೇಲೆ ಬಂದು ಬಿದ್ದಕೂಡಲೇ, ಅಲ್ಲಿಯ ಪ್ರಜೆಗಳು, ಒಗ್ಗಟ್ಟಾಗಿ ಅವರನ್ನೆಲ್ಲ ಹಿಡಿದು ಬಂಧಿಸಿ, ತಮ್ಮ ರಾಜ ನಾದ ಶೀಲವನ ಬಳಿಗೆ ಕರೆದುಕೊಂಡು ಹೋದರು




"ನಿಮ್ಮನ್ನು ನೋಡಿದರೆ ಬೇರೆ ದೇಶದವರಾಗಿರುವಂತೆ ಕಾಣುತ್ತದೆ. ಹೀಗೆ ನಮ್ಮ ಗ್ರಾಮಗಳ ಮೇಲೆ ಬಿದ್ದು ದೋಚಿಕೊಳ್ಳಲು ಕಾರಣವೇನು?" ಎಂದು ಕೇಳಿದನು.

"ಮಹಾರಾಜರೆ, ನಮ್ಮ ಹೊಟ್ಟೆಯ ಪಾಡು ಕಷ್ಟವಾದುದರಿಂದಲೇ ಹೀಗೆ ಮಾಡಬೇಕಾಯಿತು." ಎಂದರು ಕೋಸಲ ಸೈನಿಕರು.

"ನಿಮ್ಮ ಹೊಟ್ಟೆಯ ಸಮಸ್ಯೆ ಅಷ್ಟು ಕಷ್ಟವಾಗಿದ್ದರೆ ನನ್ನ ಹತ್ತಿರ ಬಂದು ಕೇಳಲಾರದೆ ಹೋದಿರಾ? ಹೋಗಲಿ, ಈಗಾದರೂ ತೆಗೆದುಕೊಳ್ಳಿರಿ!" ಎಂದು ಶೀಲವನು ಧನಾಗಾರದಿಂದ ಹಣದ ಮೂಟೆಯನ್ನು ತರಿಸಿ, ಅವರಿಗೆ ಕೊಟ್ಟು ಕಳುಹಿಸಿದನು.

ಶೀಲವನ ಈ ಪ್ರವರ್ತನೆಯನ್ನು ನೋಡಿ ಕೋಸಲದ ರಾಜನಿಗೆ ಇನ್ನಷ್ಟು ಧೈರ್ಯ ಬಂತು. ಅವರೂ ಇನ್ನೊಂದು ಸಾರಿ ಪರೀಕ್ಷಿಸಿ ನೋಡೋಣವೆಂದುಕೊಂಡು, ಎರಡನೇಸಾರಿ ಇನ್ನೂ ಹೆಚ್ಚುಮಂದಿ ಸೈನಿಕರನ್ನು, ಕಾಶೀರಾಜ್ಯದ ನಗರಗಳ ಮೇಲೆ ಬಿದ್ದು, ಕೊಳ್ಳೆ ಹೊಡೆಯಲು ಕಳುಹಿಸಿದನು.

ಆ ಸೈನಿಕರು ಸರಿಹದ್ದಿನ ಗ್ರಾಮಗಳನ್ನು ದಾಟುತ್ತಿರುವಾಗ ಕಾಶೀರಾಜ್ಯದ ಒಗ್ಗಟ್ಟಿನ ಪ್ರಜೆಗಳ ಕೈಗೆ ಸಿಕ್ಕಿಬಿದ್ದರು. ಈಸಾರಿ ಕೂಡಾ ಶಾಂತ ಶೀಲವರಾಜನು ಬಂಧಿತರಾದ ಆ ಸೈನಿಕರಿಗೆ ಯಾವ ದಂಡನೆಯನ್ನೂ ಕೊಡದೆ, ತಲಾ ಸ್ವಲ್ಪ ಹಣವನ್ನು ಕೊಟ್ಟು ಬಂಧಮುಕ್ತಮಾಡಿ ಕಳುಹಿಸಿಬಿಟ್ಟನು.

ಇಷ್ಟು ನೋಡಿದ ಮೇಲೆ ಕೋಸಲ ರಾಜನಿಗೆ ಗಟ್ಟಿನಂಬುಗೆಯುಂಟಾಗಿ ಒಳ್ಳೆಯ ಧೈರ್ಯ ಬಂದಿತು. ಆಮೇಲೆ ತಡಮಾಡದೆ ಅವನು ತನ್ನ ಸೈನ್ಯವನ್ನು ಸಾಗಿಸಿಕೊಂಡು ಕಾಶೀರಾಜ್ಯದ ಮೇಲೆ ಯುದ್ಧ ಮಾಡಲು ಹೊರಟನು. ಈ ಸಮಾಚಾರವು ಗೂಢಚಾರರ ಮೂಲಕವಾಗಿ ಕಾಶೀರಾಜ್ಯದ ಮಂತ್ರಿಗಳಿಗೂ ಸೇನಾಧಿಪತಿಗಳಿಗೂ ತಿಳಿಯಿತು. ಅವರು ಶೀಲವನ ಬಳಿಗೆ ಹೋಗಿ, "ಮಹಾರಾಜಾ, ಕೋಸಲದ ರಾಜನಿಗೆ ನಮ್ಮ ಶಕ್ತಿ ಏನೆಂಬುದು ಗೊತ್ತಿಲ್ಲದ ಹಾಗಿದೆ. ದೊಡ್ಡ ರೀತಿಯಲ್ಲಿ ಮಹಾ ದರ್ಪದಿಂದ ನಮ್ಮ ಮೇಲೆ ಯುದ್ಧಕ್ಕೆ ಬರುತ್ತಿದ್ದಾನೆ. ಅವನನ್ನು ಇದಿರಿಸಿ ಹೊಡೆದೋಡಿಸಲು ಆಜ್ಞೆಮಾಡಿರಿ." ಎಂದು ಯುದ್ಧೋತ್ಸಾಹ ತೋರಿಸಿದರು.

ಶೀಲವನು ಯುದ್ಧಕ್ಕೆ ಒಪ್ಪಿಗೆ ಕೊಡಲೇ ಇಲ್ಲ. "ಸುಮ್ಮ ಸುಮ್ಮನೆ ರಕ್ತಪಾತವು ಬೇಡವೇ ಬೇಡ. ಅವರಿಗೆ ಕಾಶೀರಾಜ್ಯವು ಬೇಕಾಗಿದ್ದರೆ ಹಾಗೆಯೇ ತೆಗೆದುಕೊಳ್ಳಲಿ ಬಿಡಿ. ಅವರು ನಿರಾತಂಕವಾಗಿ ಬರುವಂತೆ ಕೋಟೆಯ ಬಾಗಿಲನ್ನು ತೆರೆದೇ ಇರಿಸಿರಿ" ಎಂದನು ಶಾಂತಶೀಲವರಾಜ.

ಹಾಗೆಯೇ ಶೀಲವನು ಒಬ್ಬ ದೂತನನ್ನು ಕರೆದು ಕೋಸಲರಾಜನೊಂದಿಗೆ, "ನೀವು ನನ್ನ ಶತ್ರುಗಳೇನಲ್ಲ. ಮಿತ್ರರಾಗಿಯೇ ಬಂದು, ನಮ್ಮ ಕೋರಿಕೆ ಈಡೇರಿಸಿ



ಕೊಳ್ಳಬಹುದು. ನಿಮಗೆ ಸುಸ್ವಾಗತ ಬಯಸುತ್ತೇನೆ." ಎಂದು ವರ್ತಮಾನ ಕಳುಹಿಸಿದನು.

ಕೋಸಲರಾಜನು ಆ ಮಾತುಗಳನ್ನು ಕೇಳಿ, ಅದು ಶೀಲವನ ದೌರ್ಬಲ್ಯವೆಂದು ಭಾವಿಸಿಕೊಂಡನು. ಸತ್ಪ್ರವರ್ತನೆ, ರಾಜಮರ್ಯಾದೆಗಳೇನೆಂದು ತಿಳಿಯದ ಕೋಸಲರಾಜನು, ಕಾಶೀರಾಜನ ಸಭಾ ಮಂದಿರದೊಳಗೆ ಪ್ರವೇಶಿಸಿದ ಕೂಡಲೇ, ಶೀಲವ ನನ್ನೂ ಅವನ ಮಂತ್ರಿಗಳನ್ನೂ ಹಿಂಗಟ್ಟು ಮುರಿ ಗಟ್ಟುವಂತೆ ತನ್ನ ಸೈನಿಕರಿಗೆ ಆಜ್ಞೆ ಮಾಡಿದನು.

"ಅತಿಥಿಗಳಾಗಿ ಬಂದವರು ಹೀಗೆ ಪ್ರವರ್ತಿಸು ವುದು ಧರ್ಮವಲ್ಲ" ಎಂದನು ಶೀಲವ. ಆ ಮಾತು ಕೇಳಿ ಕೋಸಲರಾಜನು ವಿಕಟವಾಗಿ ನೆಗಾಡಿದನು. ಅವನ ಆಜ್ಞೆಯಂತೆ ಸೈನಿಕರು ಶೀಲವನ ಹಾಗೂ ಅವನ ಮಂತ್ರಿಗಳ ರಾಜ ಲಾಂಛನಗಳನ್ನೆಲ್ಲ ತೆಗೆದು ಹಾಕಿದರು.

ಶೀಲವನೂ ಅವನ ಮಂತ್ರಿಗಳೂ ಸಾಯಂಕಾಲ ದೊಳಗೆ ಕಾಶೀರಾಜ್ಯವನ್ನು ಬಿಟ್ಟು ಹೋಗಬೇಕೆಂದು ಕೋಸಲರಾಜನ ಆಜ್ಞೆಯಾಯಿತು. ಹಾಗೆ ಅವರು ಅರಣ್ಯಮಾರ್ಗದಲ್ಲಿ ಹೋಗುವಾಗ ಸ್ವಲ್ಪ ಹೊತ್ತಿಗೆ ಕತ್ತಲೆಯಾಯಿತು. ಎಲ್ಲರೂ ಅರಣ್ಯದ ಮರಗಳ ಕೆಳಗೆ ತಂಗಿದರು. ಅವರಿಗೆ ಆ ರಾತ್ರಿ ಭೋಜನ ಕೂಡ ಇಲ್ಲ.

ಅರ್ಧರಾತ್ರಿಯ ಹೊತ್ತಿಗೆ ಏನೋ ಶಬ್ದವಾದು ದರಿಂದ ಅವರಿಗೆ ನಿದ್ರಾಭಂಗವಾಯಿತು. ಅನೇಕ ಮಂದಿ ಕಳ್ಳರು ದೀವಿಟಿಗೆ ಹಿಡಿದುಕೊಂಡು ಅವರ ಬಳಿಗೆ ಬಂದರು. ಅವರು ಶೀಲವನನ್ನು ನೋಡಿ, ಬಗ್ಗಿ ನಮಸ್ಕಾರಮಾಡಿ, "ಮಹಾರಾಜರೆ, ನಾವು ಕಳ್ಳರು, ತಮ್ಮ ದಯೆಯಿಂದ ಇಷ್ಟುಕಾಲ ಕಳ್ಳತನದ ಕೆಲಸಬಿಟ್ಟು ಸುಖವಾಗಿದ್ದೆವು. ಆದರೆ ಇಂದಿನಿಂದ ನಮಗೆ ಕಷ್ಟಗಳು ಪ್ರಾರಂಭವಾದುವು, ಈಗಿನ ರಾಜ ನೀವು ನಮಗೆ ಕೊಡುವ ಸಲಿಗೆಗಳನ್ನು ನಿಲ್ಲಿಸಿದ್ದಾನೆ. ನಮ್ಮನ್ನು ಹಿಡಿದು ಶಿಕ್ಷಿಸಲು ಪ್ರಯತ್ನಿಸುತ್ತಾನೆ. ಅದಕ್ಕೇ ನಾವು ರಾಜ ಸೌಧದೊಳಗೆ ಪ್ರವೇಶಿಸಿ ಈ ಸೊತ್ತನ್ನೆಲ್ಲಾ ಅಪಹರಿಸಿ ತಂದೆವು. ಇದು ನಿಮಗಾಗಿ ತಂದ ರಾಜಭೋಜನ, ನಿಮ್ಮ ಭೂಷಣಗಳನ್ನೂ ಲಾಂಛನಗಳನ್ನೂ, ಖಡ್ಗಗಳನ್ನೂ ತಂದಿದ್ದೇವೆ. ನೀವು ಮೊದಲು ರಾಜೋಚಿತವಾದ ಭೂಷಣ ದರಿಸಿ, ಭೋಜನಮಾಡಿ, ಆಮೇಲೆ ನಾವು ತಂದ ಈ ಧನವನ್ನೆಲ್ಲಾ ಏನು ಮಾಡಬೇಕೆಂದು ಅಪ್ಪಣೆ ಮಾಡಿರಿ" ಎಂದರು.

ಶೀಲವನೂ, ಅವನ ಮಂತ್ರಿಗಳೂ ಭೋಜನ ಮಾಡಿದರು. ತಮ್ಮ ತಮ್ಮ ದುಸ್ತುಗಳನ್ನೂ ಧರಿಸಿದರು. ಆಮೇಲೆ ಶೀಲವನು ಕಳ್ಳರೊಂದಿಗೆ, "ಯಾವುದಕ್ಕೂ ಹೊಸರಾಜನು ನಿಮ್ಮ ಸಮಸ್ಯೆ ಗಳನ್ನು ಹೇಗೆ ಪರಿಷ್ಕರಿಸುವನೆಂದು ತಿಳಿಯುವುದು ಒಳ್ಳೆಯದು. ಅದನ್ನು ತಿಳಿದುಕೊಳ್ಳದೆ ನೀವಾಗಿಯೇ ಹೀಗೆಲ್ಲಾ ಊಹಿಸಿ ಕಳ್ಳತನಕ್ಕೆ ಕೈ ಹಾಕಿದುದು

ಒಳ್ಳೆಯ ಕೆಲಸವಾಗಲಿಲ್ಲ. ಈ ಧನವನ್ನೆಲ್ಲಾ ತೆಗೆದುಕೊಂಡು ಹೋಗಿ ರಾಜನಿಗೆ ಕೊಟ್ಟು, ನಿಮ್ಮ ಬದುಕುವ ದಾರಿಗೆ ಏನು ಮಾಡಬೇಕೆಂದು ಆತನನ್ನೇ ಕೇಳಿರಿ" ಎಂದನು.

"ಬೇಡ ಪ್ರಭೂ. ಆತಿಥ್ಯವನ್ನು ಕೊಡುವವರಿಗೆ ದ್ರೋಹ ಬಗೆದು ಹೊರದೂಡಿದವನಿಗೆ ನ್ಯಾಯ ಬುದ್ಧಿ ಇರಲಿಕ್ಕಿಲ್ಲ. ಮಹಾರಾಜರೆ, ನಾವಂತೂ ಆ ನೀಚನ ಬಳಿಗೆ ಹೋಗಿ ಅವನ ಮುಖ ನೋಡಲಾರೆವು. ನಮಗಂತೂ ಯಾವಾಗಲೂ ನೀವೇ ಮಹಾರಾಜರು" ಎಂದರು ಕಳ್ಳರು.

"ನೀವು ಆ ಹೊಸ ರಾಜನ ಬಳಿಗೆ ಹೋಗದೆ ಹೋದರೆ, ಈ ಧನವನ್ನು ತೆಗೆದುಕೊಂಡು ನಾನೇ ಅವನ ಬಳಿಗೆ ಹೋಗುತ್ತೇನೆ" ಎಂದನು ಶಾಂತಶೀಲವ.

ಬೆಳಗಾದ ಕೂಡಲೇ ಶೀಲವನು ತನ್ನ ಮಂತ್ರಿಗಳೊಂದಿಗೆ ಹೊರಟು ರಾಜಭವನಕ್ಕೆ ಹೋದನು. ಶೀಲವನನ್ನು ನೋಡಿ ಕೋಸಲರಾಜನು ಬೆರಗಾಗಿ ಸುಮ್ಮನೆ ನಿಂತನು.

ಶೀಲವನು ನಡೆದ ಸಮಾಚಾರವನ್ನು ಅವನೊಂದಿಗೆ ಹೇಳಿ "ಮಹಾರಾಜನೇ, ನೀನು ನನಗಿಂತಲೂ ಚೆನ್ನಾದ ರೀತಿಯಲ್ಲಿ ಪ್ರಜೆಗಳನ್ನು ಪಾಲಿಸುವಿ ಎಂಬ ನಂಬುಗೆಯಲ್ಲಿ ತಾನೇ ನನ್ನನ್ನು ಹೋಗಲಿಕ್ಕೆ ಹೇಳಿ ನನ್ನ ಸ್ಥಾನದಲ್ಲಿ ಕುಳಿತಿರುವಿ? ಏನೂ ಅರಿಯದ ಕಳ್ಳರು ಈ ಸಮಾಚಾರ ಗೊತ್ತಿಲ್ಲದೆ, ನಿನ್ನ ಪರಿಪಾಲನೆಯಲ್ಲಿ ತಮಗೆ ಬದುಕುವ ದಾರಿ ಇಲ್ಲವೆಂದು ತಪ್ಪಾಗಿ ಭಾವಿಸಿ, ರಾತ್ರಿಯಲ್ಲಿ ರಾಜ ಖಜಾನೆಯನ್ನು ದೋಚಿ ತಂದಿದ್ದಾರೆ. ಅವರ ಸಮಸ್ಯೆಗಳನ್ನು ನೀನು ನನಗಿಂತಲೂ ಚೆನ್ನಾಗಿ ಪರಿಷ್ಕರಿಸುವಿಯೆಂದು ನಿನ್ನ ಪರವಾಗಿ ನಾನು ಅವರಿಗೆ ಅಭಯವಿತ್ತು, ಈ ಸೊತ್ತುಗಳನ್ನೆಲ್ಲ ನಿನಗೆ ಒಪ್ಪಿಸಲು ಬಂದೆನು. ಬೇರೆ ಯಾವ ಉದ್ದೇಶವೂ ನನಗಿಲ್ಲ. ನನಗಿಂತಲೂ ಚೆನ್ನಾಗಿ ನಿನ್ನ ಪರಿಪಾಲನೆ ಇದೆ ಎಂಬ ಹೆಸರೇ ನನಗೆ ಬೇಕಾದ್ದು" ಎಂದನು.

ಈ ಮಾತುಗಳಿಂದ ಕೋಸಲರಾಜನ ಹೃದಯವು ಪರಿವರ್ತನೆ ಹೊಂದಿತು. ಅವನು ಸಿಂಹಾಸನದಿಂದ ಎದ್ದು ಬಂದು ಶೀಲವನ ಕಾಲಿಗೆ ಬಿದ್ದು, "ಮಹಾತ್ಮಾ, ಕಳ್ಳರು ಸಹಾ ಪ್ರೇಮಿಸುವಂತಹ ನಿಮ್ಮ ಮಹಿಮೆಯನ್ನೂ, ಸತ್ಪ್ರವರ್ತನೆಯನ್ನೂ ತಿಳಿದು ಕೊಳ್ಳಲಾಗದೆ, ನೀಚನಾದ ನನ್ನ ಮಂತ್ರಿಯ ಆಲೋಚನೆ ಕೇಳಿ ನಿಮಗೆ ಮಹಾದ್ರೋಹವನ್ನು ಮಾಡಿದೆನು. ನನ್ನನ್ನು ಅನುಗ್ರಹಿಸಿ, ನನ್ನ ಪಾಡಿಗೆ ಹೋಗಲು ಬಿಡಿರಿ. ನಿಮ್ಮ ಸ್ನೇಹ ಒಂದೇ ನನಗೆ ಸಾಕು" ಎಂದನು.

ಶಾಂತಶೀಲವನು ಮತ್ತೆ ಕಾಶೀರಾಜ್ಯವನ್ನು ಸ್ವೀಕರಿಸಿ ಆಳ ತೊಡಗಿದನು. ಅವನು ಕೋಸಲ ರಾಜನನ್ನು ಗೌರವಿಸಿ ಅವನ ರಾಜ್ಯಕ್ಕೆ ಕಳುಹಿಸಿಕೊಟ್ಟನು.





# ಗಜನೀಮಹಮ್ಮದನ ದಾಳಿಗಳು

ಅರಬ್ಬಿಗಳು ಸಿಂಧು ಪ್ರಾಂತವನ್ನು ಸ್ವಲ್ಪಕಾಲ ಮಾತ್ರ ಆಳಿದರೂ, ಅದು ಮತ್ತೊಂದು ವಿಧವಾಗಿ ಅವರಿಗೆ ದೊಡ್ಡ ಲಾಭಕಾರಣವಾಯಿತು. ಅವರು ಧನವನ್ನು ಮಾತ್ರವಲ್ಲ, ಭಾರತೀಯ ತತ್ವಶಾಸ್ತ್ರವನ್ನೂ, ವೈಜ್ಞಾನಿಕ, ಗಣಿತ ಸಾರಸ್ವತಗಳನ್ನೂ ಸಹ ತಮ್ಮೊಂದಿಗೆ ಒಯ್ದರು.

ಮಹೋನ್ನತವಾದ ಭಾರತದೇಶದ ವೈಭವವು ಅರಬ್ಬಿಗಳನ್ನು ಭ್ರಾಂತಗೊಳಿಸಿತು. ಕಲ್ಪಿತ ಕಥೆಗಳು, ನೀತಿ ಕಥೆಗಳು, ಇತಿಹಾಸಗಳು ಅವರಿಗೆ ಆತ್ಮಾನಂದವನ್ನಿತ್ತುವು. ಅವರ ಮೂಲಕ ಈ ಕಥಾ ಸಾಹಿತ್ಯವು ಸ್ವಲ್ಪ ಯೂರೋಪು ದೇಶಗಳನ್ನೂ ಸೇರಿತು.





ಖಲೀಫ ಹಾರೂನ್ ಅಲ್‌ರಷೀದನ ದರಬಾರಿನಲ್ಲಿ ಭಾರತದೇಶದ ಪಂಡಿತರಿಗೂ, ಜ್ಯೋತಿಶ್ಶಾಸ್ತ್ರವೇತ್ತರಿಗೂ, ಇಂದ್ರಜಾಲಿಕರಿಗೂ ತುಂಬಾ ಆದರವಿದ್ದಿತು. ಅರಬ್ ವಿದ್ವಾಂಸರು ಭಾರತದೇಶದ ಗಣಿತ ಶಾಸ್ತ್ರಗಳನ್ನು, ಮುಖ್ಯವಾಗಿ ಖಗೋಳ ಶಾಸ್ತ್ರವನ್ನು ಬಹಳ ಕುತೂಹಲದಿಂದ ಅಧ್ಯಯನ ಮಾಡುತ್ತಿದ್ದರು.



ಕ್ರಮವಾಗಿ ಸಿಂಧು ಪ್ರಾಂತದಲ್ಲಿ ಅರಬ್ಬಿಗಳ ಅಧಿಕಾರವು ಬಲಹೀನವಾಯಿತು. ಆದರೆ ಅವರು ಭಾರತೀಯರ ಧನಸಂಪತ್ತುಗಳ ಸಂಗತಿ ಮಾತ್ರ ಮರೆಯಲಿಲ್ಲ. ಹತ್ತನೆಯ ಶತಮಾನದಲ್ಲಿ ಖಲೀಫನ ಪ್ರತಿನಿಧಿಯಾಗಿ ಗಜನಿಯನ್ನು ಆಳುವ ಮಹಮ್ಮದ್, ತನ್ನನ್ನು ಸುಲ್ತಾನನೆಂದು ಪ್ರಕಟಿಸಿಕೊಂಡು ಭಾರತದೇಶದ ಮೇಲೆ ದಾಳಿ ಬಂದನು.

ಆ ಕಾಲದಲ್ಲಿ ಪಶ್ಚಿಮ ಪಂಜಾಬು ಪ್ರಾಂತವನ್ನು ಜಯಪಾಲನೆಂಬ ರಾಜನು ಪಾಲಿಸಿಕೊಂಡಿದ್ದನು. ಸುಲ್ತಾನ್ ಮಹಮ್ಮದನು ತನ್ನ ಸೈನಿಕರೊಂದಿಗೆ ಇಸ್ಲಾಂ ಮತದ ವ್ಯಾಪ್ತಿಗಾಗಿ ದಂಡಯಾತ್ರೆ ಮಾಡಬೇಕೆಂದು ಹೇಳಿ ಹುರಿದುಂಬಿಸಿ, ಜಯಪಾಲನ ರಾಜ್ಯದ ಮೇಲೆ ದಾಳಿ ಮಾಡಿದನು.





ಜಯಪಾಲನು ಪೆಶಾವರದ ಸಮೀಪದಲ್ಲಿ ಮಹಮ್ಮದನ ಸೈನ್ಯವನ್ನು ಇದಿರಿಸಿ ಸೋತು ಹೋದನು. ಈ ಅವಮಾನವನ್ನು ಸಹಿಸಲಾಗದೆ ಅವನು ಅಗ್ನಿಪ್ರವೇಶ ಮಾಡಿಕೊಂಡನು. ಅವನ ಕುಮಾರನಾದ ಆನಂದಪಾಲನು ಉಜ್ಜಯಿನಿ, ಗ್ವಾಲಿಯರ್, ಕಲಂಜರ್, ಕನೋಜಗಳ ರಾಜರನ್ನು ಒಂದುಗೂಡಿಸಿ ಶತ್ರುಗಳು ಮತ್ತೆ ದಾಳಿ ಮಾಡಿದರೆ ಇದಿರಿಸಲು ಸನ್ನದ್ಧನಾದನು.

ಅಂದುಕೊಂಡ ಹಾಗೆ ಮಹಮ್ಮದ್ ಮತ್ತೊಂದುಸಾರಿ ದಾಳಿ ಬಂದನು. ಆನಂದಪಾಲನೂ, ಅವನ ಮಿತ್ರರಾಜರೂ ಮಹಮ್ಮದನನ್ನು ಅಟಕಾಯಿಸಿ, ಅತ್ಯಂತ ಸಾಹಸದಿಂದ ಹೋರಾಡ ತೊಡಗಿದರು. ಆಗ ಆನಂದಪಾಲನ ಆನೆಗೆ ಗಾಯವಾಗಿ, ಯುದ್ಧರಂಗದಿಂದ ಓಡಿ ಹೋಯಿತು. ಅದನ್ನು ನೋಡಿ ಮಿತ್ರರಾಜರು ಅವನು ಸೋತು ಹೋದನೆಂದುಕೊಂಡು ಯುದ್ಧರಂಗದಿಂದ ತಿರೋಗಮಿಸಿದರು.





ಈ ವಿಧವಾಗಿ ವಿಜಯ ಸಾಧಿಸಿದ ಮಹಮ್ಮದನು ಅನೇಕ ರಾಜ ಪ್ರಸಾದಗಳನ್ನೂ, ಪಟ್ಟಣಗಳನ್ನೂ, ದೇವಾಲಯಗಳನ್ನೂ ವಿಧ್ವಂಸ ಮಾಡಿದನು. ಅನೇಕ ಪ್ರಜೆಗಳನ್ನೂ ಬಲಿ ತೆಗೆದುಕೊಂಡನು. ಸ್ವಲ್ಪ ಮಾತ್ರ ವ್ಯವಧಿಯಲ್ಲೇ ಅವನು ಹದಿನೈದು ಸಾರಿ ದಾಳಿ ಮಾಡಿ ಮುಲ್ತಾನ್, ಮಥುರಾ, ಕನೋಜ್ ಪಟ್ಟಣಗಳನ್ನು ನಾಶಮಾಡಿ ಅಪಾರವಾಗಿ ಅಮೂಲ್ಯವಾದ ಧನ ಸಂಪತ್ತುಗಳನ್ನು ದೋಚಿಕೊಂಡು ಹೋದನು.

ಅವನ ದುರಾಶೆ ಅವನ ಕ್ರೌರ್ಯಕ್ಕೂ, ಮತದುರಹಂಕಾರಕ್ಕೂ ಸರಿದೂಗುವಂತಿತ್ತು. ಪ್ರಭಾಸದಲ್ಲಿದ್ದ ಸೋಮನಾಥ ದೇವಾಲಯವು ಅಪಾರ ಧನ ಸಂಪತ್ತಿನಿಂದ ತುಂಬಿತ್ತು. ಅದನ್ನು ಕೇಳಿ ಮಹಮ್ಮದ್ ಅಲ್ಲಿಗೂ ದಾಳಿ ಪ್ರಾರಂಭಿಸಿದನು. ಆಗ ಗುಜರಾತನ್ನು ಪಾಲಿಸುವ ಚಾಳುಕ್ಯ ರಾಜರಿಗೆ ಅವನ ಕ್ರೂರವಾದ ದಂಡಯಾತ್ರೆಯನ್ನು ಇದಿರಿಸುವ ಶಕ್ತಿ ಸಾಲದೆ ಹೋಯಿತು.





ಅರ್ಚಕರು ಮಹಮ್ಮದನನ್ನು, ಕಡೇಪಕ್ಷ ಗರ್ಭಗುಡಿಯನ್ನಾದರೂ ನಾಶಮಾಡಬಾರದೆಂದು ಪ್ರಾರ್ಥಿಸಿದರು. ಆದರೆ ಅವನು ಅವರನ್ನು ಕೊಂದು ಗರ್ಭಗುಡಿಯನ್ನು ನೆಲಸಮಮಾಡಿ, ಅಡಗಿಸಿರುವ ಧನವನ್ನು ಹುಡುಕಿಸಿದನು.

ಎಷ್ಟೋ ವರ್ಷಗಳಿಂದ ಭಕ್ತರು ಆ ದೇವಾಲಯಕ್ಕೆ ಸಮರ್ಪಿಸಿದ ಬೆಲೆ ಬಾಳುವ ಕಾಣಿಕೆ ವಸ್ತುಗಳು ಅಲ್ಲಿಯ ಕೋಣೆಗಳಲ್ಲಿ ಅಡಗಿಸಲ್ಪಟ್ಟಿದ್ದುವು. ಅಷ್ಟೊಂದು ರತ್ನಗಳ, ಚಿನ್ನಗಳ ಧನಸಂಪತ್ತು ಕಣ್ಣಿಗೆಬಿದ್ದ ಕೂಡಲೇ ಮಹಮ್ಮದ್ ಚೆಕ್ಕಸ ಬೆರಗಾದನು. ಅವನು ಅದನ್ನೆಲ್ಲಾ ದೋಚಿಕೊಂಡು, ಆಲಯವನ್ನು ನೆಲಮಟ್ಟಮಾಡಲು ಸೈನಿಕರಿಗೆ ಆಜ್ಞೆ ಮಾಡಿದನು.





ಅಲ್ಲಿಂದ ಹಿಂದಿರುಗುವಾಗ ಅವನ ಪ್ರಯಾಣವು ಪ್ರಶಾಂತವಾಗಿರಲಿಲ್ಲ. ಯುದ್ಧ ಪ್ರಿಯರಾದ ಜಾಟರು ಅವನನ್ನು ದೊಂಬಿ ಯುದ್ಧಗಳಿಂದ ಹಿಂಡಿ ಹಿಪ್ಪಿ ಮಾಡಿದರು. ದೋಚಿಕೊಂಡ ಭಾರತದೇಶದ ಧನ ಸಂಪತ್ತಿನಿಂದ ವೈಭವವಾಗಿ ಜೀವಿಸುವ ಅವಕಾಶ ಅವನಿಗೆ ಲಭ್ಯವಾಗಲಿಲ್ಲ. ಬೇಗದಲ್ಲೇ ವ್ಯಾಧಿಗ್ರಸ್ತನಾಗಿ ಮಹಮ್ಮದನು ೧೦೩೦ ರಲ್ಲಿ ಸತ್ತು ಹೋದನು. ಅವನ ಕ್ರೌರ್ಯಗಳ ಗಾಯವು ಭಾರತದೇಶಕ್ಕೆ ಎಂದೂ ಮಾಯದಂತಹುದು.

# ಮರೆಯಲಾರದ ಸತ್ಯ

ಕೆರೂರಿನಲ್ಲಿ ಕಂದಸ್ವಾಮಿ ಎಂಬ ಧನಿಕರೊಬ್ಬರಿದ್ದರು. ಅವರಿಗೆ ನಾಲ್ವರು ಗಂಡು ಮಕ್ಕಳು. ತಂದೆಯ ಮೇಲೆ ಅವರಿಗೆ ಭಕ್ತಿ ಗೌರವಗಳಿದ್ದುವು. ಆದರೆ ಅವರವರೊಳಗೆ ಸಣ್ಣ ಪುಟ್ಟ ವಿಷಯಗಳಲ್ಲಿ ಜಗಳಾಡಿಕೊಳ್ಳುತ್ತಿದ್ದರು. ಅದನ್ನು ನೋಡಿ ಕಂದಸ್ವಾಮಿ ನೊಂದುಕೊಳ್ಳುವರು.

ಒಂದು ಸಾರಿ ಕಂದಸ್ವಾಮಿಗೆ ತೀವ್ರ ಕಾಯಿಲೆ ಬಂದಿತು. ಈ ಕಾಯಿಲೆಯಿಂದ ತಾನು ಏಳಲಾರೆನೆಂದು ಅವರಿಗೆ ಭಯವಾಯಿತು. ತನ್ನ ಅನಂತರ ಮಕ್ಕಳು ಒಗ್ಗಟ್ಟಿನಲ್ಲಿರಬೇಕೆಂಬುದು ಅವರ ಅಭಿಲಾಷೆ. ಅದಕ್ಕಾಗಿ ಯೋಚಿಸ ತೊಡಗಿದರು.

ಅವರ ಮನೆಯ ಮುಂದಿನ ಖಾಲೀ ಸ್ಥಳದಲ್ಲಿ ಒಂದು ಕೊಬ್ಬಿದ ಎತ್ತು ಸ್ವೇಚ್ಛೆಯಾಗಿ ತಿರುಗಿ ಕೊಂಡಿತ್ತು. ಅವರು ತನ್ನ ಹಿರಿಯ ಮಗನಿಗೆ ಕಿರಿ ಬೆರಳು ಗಾತ್ರದ ಒಂದು ಹಗ್ಗವನ್ನು ಕೊಟ್ಟು, ಆ ಎತ್ತನ್ನು ಬಾಗಿಲ ಹತ್ತಿರ ತಂದು ಕಟ್ಟಲು ಹೇಳಿದರು.

ಹಿರಿಯ ಮಗನು ಎತ್ತಿನ ಕೊರಳಿಗೆ ಆ ಹಗ್ಗವನ್ನು ಹಾಕಿ, ಎಳೆಯಲು ನೋಡಿದಾಗ, ಎತ್ತು ಅದನ್ನು ಎಳೆದು ಕಡಿದುಕೊಂಡು ದೂರ ಓಡಿತು. ಆಗ ಕಂದಸ್ವಾಮಿ ಅಲ್ಲಿದ್ದ ಅಂತಹುದೇ ನಾಲ್ಕು ಹಗ್ಗಗಳನ್ನು ಮಗಂದಿರಿಗೆ ತೋರಿಸಿ ಅವುಗಳನ್ನು ಸೇರಿಸಿ ಹೆಣೆಯಲು ಹೇಳಿದರು. ನಾಲ್ವರೂ ಸೇರಿ ಹಾಗೆಯೇ ಮಾಡಿದರು. ಈಸಾರಿ ಚಿಕ್ಕ ಮಗನೊಬ್ಬನೇ ಹೋಗಿ ಆ ಹಗ್ಗದಿಂದ ಎತ್ತನ್ನು ಕಟ್ಟಿ ಎಳೆದು ತಂದು ಬಾಗಿಲ ಹತ್ತಿರ ಕಟ್ಟಿ ಹಾಕಿಬಿಟ್ಟನು.

ಕಂದಸ್ವಾಮಿ ತಮ್ಮ ನಾಲ್ವರು ಮಗಂದಿರೊಂದಿಗೆ, "ಆ ಕೊಬ್ಬಿದ ಎತ್ತು ಜೀವನದಲ್ಲಿ ನಿಮಗೆ ಇದಿರಾಗುವ ಕಷ್ಟನಷ್ಟಗಳಿಗೆ ಪ್ರತಿರೂಪ. ಒಂದು ಹಗ್ಗದಿಂದ ಅದನ್ನು ಬಗ್ಗಿಸಲು ಸಾಧ್ಯವಾಗದು. ನೀವು ಬೇರೆ ಬೇರೆಯಾಗಿ ಅದನ್ನು ವಶಪಡಿಸಿಕೊಳ್ಳಲಾರಿರಿ. ಈ ಸತ್ಯವನ್ನು ಎಂದೂ ಮರೆಯ ಬೇಡಿರಿ. ಒಗ್ಗಟ್ಟಿನಲ್ಲೇ ಬಲವಿರುವುದು" ಎಂದರು.

ನಾಲ್ವರೂ ಒಮ್ಮನಸ್ಸಿನಿಂದ ತಂದೆಗೆ ಮಣಿದರು.

—"ಕಮಲಾ ಪರಮಗುರು"





# ತಕ್ಕ ಬಹುಮಾನ

ಒಬ್ಬಾನೊಬ್ಬ ರಾಜನ ಹತ್ತಿರ ವೆಂಕಣ್ಣ ಮತ್ತು ಸಂಕಣ್ಣ ಎಂಬವರು ತೋಟಮಾಲಿಗಳಾಗಿ ಕೆಲಸ ಮಾಡುತ್ತಿದ್ದರು. ಬೆಳಗ್ಗಿನಿಂದ ಮಧ್ಯಾಹ್ನದವರೆಗೆ ಒಬ್ಬನಾದರೆ, ಮಧ್ಯಾಹ್ನದಿಂದ ಸಂಜೆಯವರೆಗೆ ಇನ್ನೊಬ್ಬ. ವಾರಕ್ಕೊಮ್ಮೆ ಅವರ ಹೊತ್ತುಗಳೂ ಬದಲಾವಣೆಯಾಗುತ್ತಿದ್ದುವು.

ಒಂದು ದಿನ ಸಂಕಣ್ಣನು ಗಿಡಗಳ ಬುಡವನ್ನು ಕೆದಕಿ ಈಟು ಹಾಕಿಕೊಂಡಿರುವಾಗ, ಮಣ್ಣಿನಲ್ಲಿ ಏನೋ ತಳತಳನೆ ಹೊಳೆಯಿತು. ಅವನು ಅದನ್ನು ಎತ್ತಿಕೊಂಡು ನೋಡಿದನು. ಅದೊಂದು ಚಿನ್ನದ ಸರ, ಆದರೆ ಕೆಲವು ದಿನಗಳಿದ ಅದು ಮಣ್ಣಿನೊಳಗಿದ್ದುದರಿಂದ ಅಲ್ಲಲ್ಲಿ ಕಂದಿಕೊಂಡಿದ್ದಿತು.

ಸಂಕಣ್ಣ ಆ ಸರವನ್ನು ನೀರಿನಲ್ಲಿ ಶುಭ್ರವಾಗಿ ತೊಳೆದು ರಾಜನ ಬಳಿಗೆ ಹೋಗಿ, ತನಗೆ ಆ ಸರವು ಎಲ್ಲಿ ಹೇಗೆ ದೊರಕಿತೆಂಬುದನ್ನು ಹೇಳಿ ಒಪ್ಪಿಸಿದನು. ರಾಜನು ಅದನ್ನು ಅಂತಃಪುರಕ್ಕೆ ತೆಗೆದುಕೊಂಡು ಹೋಗಿ, ವಿಚಾರಿಸಿದಾಗ ಅದು ಅನೇಕ ದಿನಗಳ ಹಿಂದೆ ತನ್ನ ಕುಮಾರಿ ಕಳೆದುಕೊಂಡ ಸರವೆಂದು ತಿಳಿಯಿತು.

ರಾಜನು ಸಂಕಣ್ಣನ ಪ್ರಾಮಾಣಿಕತೆಯನ್ನು ಮೆಚ್ಚಿ ಸಂತೋಷಪಟ್ಟು, ಎಲ್ಲಾ ಸೇವಕರ ಇದಿರಿನಲ್ಲಿ ಅವನಿಗೆ ನೂರು ವರಹಗಳನ್ನು ಬಹುಮಾನವಾಗಿ ಕೊಟ್ಟನು.

ಹೀಗೆ ಸಂಕಣ್ಣನನ್ನು ರಾಜನು ಎಲ್ಲರ ಇದಿರಿನಲ್ಲಿ ಪ್ರಶಂಸೆ ಮಾಡಿ ಬಹುಮಾನ ಕೊಟ್ಟುದನ್ನು ನೋಡಿ ವೆಂಕಣ್ಣನಿಗೆ ಹೊಟ್ಟೆ ತೊಳಸಲು ತೊಡಗಿ ಸಂಕಟವೆನಿಸಿತು. ಅದು ಅಸೂಯೆಯ ಬೆಂಕಿಯಾಗಿ ಮಾರ್ಪಟ್ಟಿತು. ತೋಟಮಾಲೀ ಕೆಲಸಕ್ಕೆ ರಾಜನು ಕೊಡುವ ಸಂಬಳದ ಹಣವು ಅವನು ಸುಖವಾಗಿ ಜೀವಿಸಲು ಸಾಕಷ್ಟಿದ್ದರೂ, ಮನಸ್ಸಿನೊಳಗೆ ಒಂದು ಮಹತ್ವಾಕಾಂಕ್ಷೆ ಅವನಿಗೆ ಎಂದಿನಿಂದಲೋ ಇದ್ದೇ ಇದ್ದಿತು. ಯಾವುದೋ ಒಂದು ವಿಧದಲ್ಲಿ ರಾಜನನ್ನು ಮೆಚ್ಚಿಸಿ, ಸಾಧ್ಯವಾದರೆ ಆಸ್ಥಾನದ ಜವಾನನಾಗಿ ಮೇಲೆ ಬರಬೇಕೆಂಬುದು ಅವನ ಆಶೆ. ಆದರೆ ರಾಜನ ಇದಿರಿಗೆ ಹೋಗುವಂಥ ಅವಕಾಶವೇ ಅವನಿಗೆ ಸಿಕ್ಕಿರಲಿಲ್ಲ.

"ಒಂದು ಸಾರಿ ಮಹಾರಾಜರ ಸಂದರ್ಶನದ ಸಂದರ್ಭ ಸಿಕ್ಕಿಬಿಟ್ಟರೆ, ನನ್ನ ವಾಕ್ಚಾತುರ್ಯದಿಂದ

ಅವರನ್ನು ಮೆಚ್ಚಿಸಿ ಈ ತೋಟಮಾಲಿಕೆಯಿಂದ ಹೆಚ್ಚಿನವನಾಗುತ್ತಿದ್ದೆ. ಎಂದೆಂದಿಗೂ ಈ ತೋಟ ಮಾಲೀತನ ಯಾರಿಗಾದೀತು ?" ಎಂದು ತನ್ನ ಹೆಂಡತಿಯೊಂದಿಗೆ ಹೇಳುತ್ತಿದ್ದನು.

ಈಗ ರಾಜನು ಸಂಕಣ್ಣನನ್ನು ಮೆಚ್ಚಿಕೊಂಡು ನೂರು ವರಹ ಬಹುಮಾನ ಬೇರೆ ಕೊಟ್ಟುದರಿಂದ ವೆಂಕಣ್ಣನ ಮನಸ್ಸು ಬಗೆಬಗೆಯಾಗಿ ಕದಡಿತು. ಅವನು ಮೈ ಸರಿಯಿಲ್ಲವೆಂದು ಒಂದು ವಾರ ರಜೆ ತೆಗೆದುಕೊಂಡನು.

ದೀರ್ಘವಾಗಿ ಆಲೋಚಿಸಿ, ಅತ್ಯುತ್ತಮವಾದ ಒಂದು ಉಪಾಯವನ್ನು ನಿರ್ಧರಿಸಿದನು. ಅದರಿಂದ ತನಗೆ ಗೆಲುವು ನಿಶ್ಚಯ !

ಆಮೇಲೆ ಅವನು ಹೆಂಡತಿಯೊಂದಿಗೆ ಹೇಳಿ ಒಪ್ಪಿಸಿ, ಅವಳ ಕೊರಳಿನಲ್ಲಿದ್ದ ಚಿನ್ನದ ಸರವನ್ನು ಪಡೆದು, ಅದನ್ನು ರಾಜನ ಉದ್ಯಾನದೊಳಗಿನ ಒಂದು ಗಿಡದ ಬುಡದಲ್ಲಿ ಹುಗಿದಿಟ್ಟನು. ಆಮೇಲೆ ನಾಲ್ಕು ದಿನಗಳ ನಂತರ ಅದನ್ನು ತೆಗೆದುಕೊಂಡು ರಾಜನ ಬಳಿಗೆ ಹೋಗಿ, ತನಗೆ ಅದು ಉದ್ಯಾನದ ಮಣ್ಣಿನಲ್ಲಿ ದೊರಕಿತೆಂದು ಹೇಳಿ ವಿನಯದಿಂದ ರಾಜನ ಮುಂದಿಟ್ಟನು.

ರಾಜನು ಅಂತಃಪುರಕ್ಕೆ ಹೋಗಿ ರಾಣಿಯೊಂದಿಗೆ ಕೋಪದಿಂದ, "ಏನಿದು ? ಈ ನಡುವೆ ನಿಮ್ಮ ಹೆಂಗುಸರಿಗೆ ಮತಿಮರೆವು ಜಾಸ್ತಿಯಾದ ಹಾಗಿದೆ. ಉದ್ಯಾನದಲ್ಲಿ ಹುಚ್ಚರಹಾಗೆ ನಲಿದಾಡಿಕೊಂಡು ಒಂದೊಂದೇ ನಗಗಳನ್ನು ಬಿಸುಡುವುದೆಂದರೇನಿದು ? ಯಾರದಿದು ?" ಎಂದನು.

ರಾಣಿ ಆ ಸರವನ್ನು ಅಂತಃಪುರದೊಳಗಿನ ಎಲ್ಲಾ ಸ್ತ್ರೀಯರಿಗೂ ತೋರಿಸಿದಳು. ಅದು ಅವ ರಾರದೂ ಅಲ್ಲವೆಂದು ಗೊತ್ತಾಯಿತು. ಆಗ ರಾಜನು ಆಶ್ಚರ್ಯಪಟ್ಟು, ಆಸ್ಥಾನದ ಸ್ವರ್ಣಕಾರನನ್ನು ಕರೆಯಿಸಿ, ಸರವನ್ನು ಪರೀಕ್ಷೆ ಮಾಡಿ ನೋಡುವಂತೆ ಹೇಳಿದನು.

ಸ್ವರ್ಣಕಾರನು ಅದನ್ನು ಪರೀಕ್ಷಿಸಿ ನೋಡಿ, "ಮಹಾರಾಜರೆ, ಈ ಸರವು ಕೇವಲ ಬೆಟ್ಟೆ ಚಿನ್ನದಿಂದ



ಮಾಡಿದಂಥಾದ್ದು. ಇದು ತಮ್ಮ ಅಂತಃಪುರದೊಳಗಿನವರದಾಗಿರಲು ಸಾಧ್ಯವೇ ಇಲ್ಲ" ಎಂದನು.

ರಾಜನ ಆಲೋಚನೆ ಹರಿಯಿತು. ಉದ್ಯಾನದೊಳಗೆ ಅಂತಃಪುರ ಸ್ತ್ರೀಯರ ಹೊರತು ಹೊರಗಿನವರಾರೂ ಬರುವಂತಿಲ್ಲ. ಹಾಗಾದರೆ ಇದರಲ್ಲಿ ತನ್ನ ತೋಟಮಾಲಿ ವೆಂಕಣ್ಣನ ಎತ್ತುಗಡೆ ಏನೋ ಇರಬಹುದು ಎಂಬ ಸಂದೇಹಕ್ಕೆ, ಈ ಮೊದಲು ನಡೆದ ಸಂಕಣ್ಣನ ಘಟನೆ ಬಲ ಕೊಟ್ಟಿತು.

ಕೂಡಲೇ ರಾಜನು ಒಬ್ಬ ಭಟನನ್ನು ಕರೆದು ಹೇಳುವಂತಹುದನ್ನು ಹೇಳಿ, ವೆಂಕಣ್ಣನ ಮನೆಗೆ ರಾತ್ರಿಯಲ್ಲಿ ಕಾವಲು ಕಾಯಲು ಕಳುಹಿಸಿದನು. ಆ ಭಟನು ಕಿವಿ ತೀಡಿಕೊಂಡು ವೆಂಕಣ್ಣನ ಮನೆಯ ಬದಿಯಲ್ಲಿರುವಾಗ, ರಾತ್ರಿ ಮಲಗುವ ಮೊದಲು, ವೆಂಕಣ್ಣನ ಹೆಂಡತಿ ಕೋಪದಿಂದ ಗಂಡನೊಂದಿಗೆ, "ಇವತ್ತೂ ಏನೂ ಇಲ್ಲಾ ಅಂತೀರಿ ! ಬೇಡಾ ಬೇಡಾ ಅಂದರೂ ಕೇಳದೆ ನನ್ನ ಕುತ್ತಿಗೆಯಲ್ಲಿದ್ದ ಸರವನ್ನು ತೆಗೆದುಕೊಂಡು ಹೋಗಿ ಮಹಾರಾಜರ ಹತ್ತಿರ ಕೊಟ್ಟಿರಿ, ಏನೋ ಬಹುಮಾನ ಸಿಕ್ಕುತ್ತೇ ಅಂತ ? ಇನ್ನೂ ಸರವೂ ಇಲ್ಲ, ಬಹುಮಾನವೂ ಇಲ್ಲ" ಎಂದಳು.

"ದೊಡ್ಡವರ ಮನಸ್ಸು ! ಅವಸರಪಟ್ಟರೆ ಹೇಗೆ? ಮಹಾರಾಜರಿಗೆ ಸಾವಿರ ಕೆಲಸ. ಆ ಸರ ಯಾರದೂ ಅಲ್ಲವೆಂದು ಗೊತ್ತಾದ ಮೇಲೆ ಖಜಾನೆಗೆ ಕಳಿಸಿ ನನಗೆ ಸಂಕಣ್ಣನಿಗಿಂತ ಎರಡು ಪಾಲು ಹೆಚ್ಚು ಬಹುಮಾನ ಕೊಡುತ್ತಾರೆ, ನೋಡು ! ಅದೃಷ್ಟ ಚೆನ್ನಾಗಿದ್ದರೆ ದೊಡ್ಡ ಕೆಲಸ ಕೂಡಾ ಸಿಕ್ಕೀತು" ಎಂದನು ವೆಂಕಣ್ಣ.

ಬೆಳಗ್ಗೆ ಗೂಢಚಾರನು ಹಿಂದಿರುಗಿ ಹೋಗಿ ರಾಜನಿಗೆ ತಾನು ಕೇಳಿದುದನ್ನು ನಿವೇದಿಸಿದನು. ರಾಜನು ವೆಂಕಣ್ಣನನ್ನು ತನ್ನ ಬಳಿಗೆ ಕರೆಯಿಸಿ, "ನಿನಗೆ ತೋಟದಲ್ಲಿ ಸಿಕ್ಕಿದ ಸರ ಅಂತಃಪುರದ ಕಸ ಬಳಿಯುವವಳದೆಂದು ಗೊತ್ತಾಯಿತು. ಆ ಹೆಂಗಸು ನಿನ್ನ ಒಳ್ಳೆಯ ಬುದ್ಧಿಗೆ ಮೆಚ್ಚಿ, ಅವಳ ತಾಖತ್ತಿಗೆ ತಕ್ಕ ಹಾಗೆ ಒಂದು ಅಪೂರ್ವ ಬಹುಮಾನ ಕಳಿಸಿದ್ದಾಳೆ" ಎಂದು ಬದಿಗೆ ನೋಡಿ "ಎಲ್ಲಿ ಅದು ?" ಎಂದನು.

ಕೂಡಲೇ ಭಟನು ಒಳಗೋಣೆಯಿಂದ ಹೊಚ್ಚ ಹೊಸ ಕಸಪೊರಕೆಯೊಂದನ್ನು ತಂದು ವೆಂಕಣ್ಣನಿಗೆ ಕೊಟ್ಟನು, ಅವನ ಬುದ್ಧಿಯ ಕಸ ಬಳಿಯಲಿಕ್ಕೋ ಎಂಬ ಹಾಗೆ !

ವೆಂಕಣ್ಣ ಬೆಪ್ಪಾಗಿ ಬೆರಗಾಗಿ, ರಾಜನನು ನೋಡಲಾಗದೆ ನಮಸ್ಕರಿಸಿ, ತಲೆ ತಗ್ಗಿಸಿಕೊಂಡೇ ಮನೆಗೆ ಹೋದನು. ಅಷ್ಟು ದಂಡನೆ ಸಾಕೆಂದು ಕೊಂಡು ಮತ್ತೇನೂ ಮಾಡಲಿಲ್ಲ ರಾಜ.



# ಹೊರಗಿನ ವೇಷ

ಒಮ್ಮೆ ಶಿಳ್ಳಂಗೇರಿ ರಾಜ್ಯದಲ್ಲಿ ದಾರಿ ದೋಚುವ ಕಳ್ಳರ ಕಾಟ ವಿಪರೀತವಾಯಿತು. ಅವರನ್ನು ಹಿಡಿಯಲು ಸಾಧ್ಯವಾಗದೆ ಹೋದ ಕೋತ್ವಾಲನು, ಒಂದು ಹೊಸ ಉಪಾಯಮಾಡಿದನು. ಅದೇನಂದರೆ ರಕ್ಷಕಭಟರಿಗೆ ಕಳ್ಳರ ಹಾಗೆ, ತಲೆಕಟ್ಟು ದೊಣ್ಣೆ ಸುರಿಗತ್ತಿ ಮೊದಲಾದುವನ್ನು ಕೊಟ್ಟು, ಕಳ್ಳರನ್ನು ಹಿಡಿಯಲು ಹೇಳಿದನು.

ಅದರಂತೆ ಅವರೆಲ್ಲ ಹೋಗಿ ಕಾಡು ದಾರಿಯಲ್ಲಿ ಹೊಂಚಿಕೊಂಡಿದ್ದರು.

ಅದೇ ಸಮಯದಲ್ಲಿ ಕಳ್ಳರ ನಾಯಕನಿಗೆ ಕೂಡಾ ಹೊಸ ಉಪಾಯ ತೋರಿತು. ಕಳ್ಳರಿಗೆ ರಕ್ಷಕಭಟರ ಹಾಗೆ ವೇಷ ಹಾಕಿಸಿ, ಇನ್ನಷ್ಟು ಸುಲಭವಾಗಿ ಕಳ್ಳತನ ಮಾಡಬಹುದೆಂದುಕೊಂಡು ಅವನು ತನ್ನ ಭಟರಿಗೆ ರಕ್ಷಕಭಟರ ವೇಷ ಹಾಕಿಸಿದನು.

ಒಂದುದಿನ ಅಡವಿದಾರಿಯಲ್ಲಿ ಹಾಗೆ ವೇಷಧಾರಿಗಳಾದ ಕಳ್ಳರೂ, ರಕ್ಷಕಭಟರೂ ಸಂಧಿಸಿಕೊಂಡರು. ಕಳ್ಳರ ವೇಷದಲ್ಲಿದ್ದ ರಕ್ಷಕಭಟರು, ರಕ್ಷಕಭಟರಂತಿದ್ದ ಕಳ್ಳರನ್ನು ನೋಡಿ, "ಇವತ್ತು ಯಾರಾದರೂ ಸಿಕ್ಕಿದರೆ ?" ಎಂದು ಕೇಳಿದರು.

ಆ ಪ್ರಶ್ನೆಗೆ ರಕ್ಷಕಭಟರ ವೇಷದಲ್ಲಿದ್ದ ಕಳ್ಳರು, "ಯಾರೂ ಸಿಗಲಿಲ್ಲ, ನಿಮ್ಮ ಸಮಾಚಾರವೇನು?" ಎಂದು ಕೇಳಿದರು.

"ನಮಗೂ ಅಷ್ಟೇ !" ಎಂದರು ಕಳ್ಳರ ವೇಷದಲ್ಲಿದ್ದ ರಕ್ಷಕಭಟರು.

ಆಮೇಲೆ ಅವರವರ ದಾರಿ ಹಿಡಿದು ಎಲ್ಲರೂ ಹೋಗಿಬಿಟ್ಟರು.

ರಕ್ಷಕಭಟರು ಕೋತ್ವಾಲನ ಬಳಿಗೆ ಹೋಗಿ, ತಾವು ಆ ದಿನ ಅಡವಿದಾರಿಯಲ್ಲಿ ಕೆಲವಂದಿ ರಕ್ಷಕಭಟರನ್ನು ಕಂಡುದಾಗಿ ಹೇಳಿದರು.

ಕೋತ್ವಾಲನು ಆಶ್ಚರ್ಯಪಟ್ಟು, "ನಿಮಗೆ ಬುದ್ಧಿಯೇ ಇಲ್ಲ. ಅವರು ನಿಜಕ್ಕೂ ರಕ್ಷಕಭಟರಾದರೆ ಕಳ್ಳರ ವೇಷದಲ್ಲಿದ್ದ ನಿಮ್ಮನ್ನು ಹಿಡಿಯದಿರುತ್ತಿದ್ದರೆ ? ಅಷ್ಟೂ ಗೊತ್ತಾಗ ಬೇಡವೆ ? ಅವರು ಮಾರುವೇಷದಲ್ಲಿದ್ದ ಕಳ್ಳರು !" ಎಂದನು.

ಕಳ್ಳರ ನಾಯಕನು ಕೂಡಾ ತನ್ನ ಅನುಚರರು ಹೇಳಿದ ಮಾತು ಕೇಳಿ, "ಬುದ್ಧಿಯಿಲ್ಲದವರೇ ! ನೀವು ನೋಡಿದ್ದು ಕಳ್ಳರ ವೇಷ ಹಾಕಿದ ರಕ್ಷಕಭಟರನ್ನೇ. ಹಾಗಿಲ್ಲ ದಿದ್ದರೆ ರಕ್ಷಕಭಟರ ವೇಷದ ನಿಮ್ಮನ್ನು ನೋಡಿ ಅವರು ಓಡಿಬಿಡುತ್ತಿದ್ದರು. ವೇಷ ಬದಲಾಯಿಸಿದರೂ ಅವರದಾಗಲೀ ನಮ್ಮ ದಾಗಲೀ ಗುಣ ಬದಲಾವಣೆಯಾಗಲೇ ಇಲ್ಲ" ಎಂದನು.






ಹಿಂದೆ ಕಾಟೂರು ಎಂಬ ಊರಿನಲ್ಲಿ ಶಿವಣ್ಣ ಎಂಬ ರೈತನೊಬ್ಬನಿದ್ದ. ಅವನ ಮಗನಿಗೆ ಬಲ್ಲಯ್ಯ ನೆಂದು ಹೆಸರಿಟ್ಟಿದ್ದರು. ಅವನು ಎರಡು ವರ್ಷ ಪ್ರಾಯದ ಮಗುವಾಗಿರುವಾಗಲೇ ಚೆನ್ನಾಗಿ ಮಾತಾಡುವುದನ್ನು ನೋಡಿ ಎಲ್ಲರಿಗೂ ಆಶ್ಚರ್ಯ ವಾಗಿತ್ತು. ವಿಚಿತ್ರವೆಂಬಂತೆ ಒಂದುದಿನ ಮಗು ಬಲ್ಲಯ್ಯ ತಂದೆಯ ಕೈಯಲ್ಲಿದ್ದೊಂದು ಡಬ್ಬಿಯನ್ನು ನೋಡಿ "ಹಣ ! ಹಣ !" ಎಂದನು.

ಆ ಡಬ್ಬಿಯೊಳಗೆ ನಿಜಕ್ಕೂ ಹಣವೇ ಇದ್ದಿತು. ಈ ವಿಷಯ ಇಷ್ಟು ಸಣ್ಣ ಮಗುವಿಗೆ ಹೇಗೆ ಗೊತ್ತಾಯಿತೋ ಎಂದು ಎಲ್ಲರಿಗೂ ಆಶ್ಚರ್ಯ.

ಒಂದುದಿನ ಬಲ್ಲಯ್ಯ ಗೋಡೆ ಬದಿಯಲ್ಲಿದ್ದೊಂದು ಮರದ ಪೆಟ್ಟಿಗೆಯನ್ನು ತೋರಿಸುತ್ತ, "ಹಾವು ! ಹಾವು !" ಎನ್ನಲು ಪ್ರಾರಂಭಿಸಿದನು. ಗಂಡ ಹೆಂಡಿರಿಬ್ಬರೂ ಗಾಬರಿ ಬಿದ್ದು ಅತ್ತಿತ್ತ ನೋಡುತ್ತಿರಲು, ಆ ಪೆಟ್ಟಿಗೆಯ ಮುಚ್ಚಳ ಸ್ವಲ್ಪ ಕದಲುವುದು ಕಂಡಿತು.

ಶಿವಣ್ಣ ಆ ಪೆಟ್ಟಿಗೆಯನ್ನು ಬೀದಿ ಬದಿಗೆ ಎತ್ತಿಕೊಂಡು ಹೋಗಿ, ಕೌಚಿ ಹಾಕಿ, ಕೈಯಲ್ಲಿ ದೊಣ್ಣೆ ಹಿಡಿದು ಸಿದ್ಧನಾದನು. ಕೆಳಗೆಬಿದ್ದ ಹಳೆಯ ಬಟ್ಟೆಗಳ ಸುರುಳಿಯೊಳಗಿನಿಂದ ಒಂದು ಹಾವು ಹೊರಗೆ ಹೊರಟಿತು. ಶಿವಣ್ಣ ಅದನ್ನು ದೊಣ್ಣೆಯಿಂದ ಹೊಡೆದು ಕೊಂದುಬಿಟ್ಟನು.

ಡಬ್ಬಿಯೊಳಗಿರುವ ಹಣದ ವಿಷಯ, ಪೆಟ್ಟಿಗೆಯೊಳಗಿರುವ ಹಾವಿನ ಸಂಗತಿ ತನ್ನ ಮಗನಿಗೆ ಕಾಣುವುದೆಂದರೆ ಅವನ ಕಣ್ಣಿನಲ್ಲಿ ಏನೋ ವಿಶೇಷ ವಿರಬೇಕೆಂದು ಶಿವಣ್ಣನಿಗೆ ಅನುಮಾನವಾಯಿತು. ಅವನು ತನ್ನ ಕೈಮುಷ್ಟಿಯೊಳಗೆ ಬೆಲ್ಲದ ತುಂಡನ್ನು ಹಿಡಿದುಕೊಂಡು, ಬಲ್ಲಯ್ಯನ ಹತ್ತಿರಬಂದು "ಏನಿದೆ ನನ್ನ ಕೈಯೊಳಗೆ ?" ಎಂದು ಕೇಳಿದನು.

"ಬೆಲ್ಲ !" ಎಂದ ಬಲ್ಲಯ್ಯ. ಅದನ್ನು ಕೇಳಿ ತನ್ನ ಮಗನ ಮೇಲೆ ಯಾವುದೋ ದೆವ್ವ ಆವಹಿಸಿರಬೇಕೆಂದು ಗಂಡ ಹೆಂಡಿರು ಮಾತಾಡಿಕೊಂಡಿರುವಾಗ, ಬಲ್ಲಯ್ಯ, ಹೊರಗಿನ ಕಡೆಗೆ ನೋಡಿ, "ಎಮ್ಮೆ ! ಎಮ್ಮೆ !" ಎಂದನು.

ಕೋಣೆಯೊಳಗೆ ಕುಳಿತುಕೊಂಡು ಹೊರಗಿನ ಕಡೆಗೆ ನೋಡಿ, ಹಾಗೆ ಹೇಳುವುದನ್ನು ಕೇಳಿ ಶಿವಣ್ಣನು ಹೊರಗೆಹೋಗಿ ನೋಡಿದನು.

ಆರ್. ಎಸ್. ನಾರಾಯಣಮೂರ್ತಿ

ಅಲ್ಲೆಲ್ಲಿಯೂ ಎಮ್ಮೆ ಕಾಣಲಿಲ್ಲ. ಮನೆಯ ಹಿಂದಿನ ಗೋಡೆಯಾಚೆಗೆ ಒಂದು ಎಮ್ಮೆ ನಿಂತುಕೊಂಡಿದ್ದಿತು.

ಇದು ದೆವ್ವದ ಶಕ್ತಿಯಾಗಿರಲಿಕ್ಕಿಲ್ಲ; ದೆವ್ವ ದೇವರು ಹಿಡಿದವರಿಗೆ ನಡುಕ ಬರುತ್ತದೆ. ಅದು ಯಾವಾಗಲೂ ಇರದು. ಇದು ಇವನ ಕಣ್ಣಿಗೇ ಇರುವ ಶಕ್ತಿ ಎಂದು ಶಿವಣ್ಣನಿಗೆ ಗೊತ್ತಾಯಿತು. ಇಂತಹ ದೃಷ್ಟಿಶಕ್ತಿಯುಳ್ಳ ಮಗನಿಂದ ಧನ ಸಂಪಾದನೆ ಮಾಡಿಕೊಳ್ಳುವುದಕ್ಕೆ ಒಳ್ಳೆಯ ದಾರಿ ಯಿದೆಯೆಂದು ಆ ಗಂಡ ಹೆಂಡಿರು ಮಾತಾಡಿ ಕೊಂಡರು. ಅಂತಲೇ ಬಲ್ಲಯ್ಯನ ವಿಷಯವು ಬೇರೆ ಯಾರಿಗೂ ತಿಳಿಯದಂತೆ ಜಾಗ್ರತೆ ತೆಗೆದು ಕೊಳ್ಳ ತೊಡಗಿದರು. ಬಾಲಕನಾದ ಬಲ್ಲಯ್ಯ ಹೊರಗೆ ಸುತ್ತಾಡದಂತೆ ನೋಡಿಕೊಳ್ಳುತ್ತಿದ್ದರು. ಅವರು ಅವನ ಕಣ್ಣಿಗೆ ಬಟ್ಟೆಕಟ್ಟಿ, ಇದಿರಿನಲ್ಲಿರುವ ಹಾಗು ಗೋಡೆಯಾಚೆಗಿರುವ ವಸ್ತುಗಳನ್ನು ಕುರಿತು ಕೇಳಿ ತಿಳಿದು ತೃಪ್ತರಾಗುತ್ತಿದ್ದರು.

ಬಲ್ಲಯ್ಯನಿಗೆ ನಾಲ್ಕುವರ್ಷ ಪ್ರಾಯವಾದಾಗ, ಒಂದುದಿನ ಶಿವಣ್ಣ ನಾಲ್ಕಾರು ಜನರೊಂದಿಗೆ, ತನ್ನ ಮಗನಿಂದ ಒಂದು ವಿಚಿತ್ರ ಪ್ರದರ್ಶನ ತೋರಿಸುವೆನೆಂದು ಹೇಳಿದನು. ಅದನ್ನು ನೋಡಲು ಅನೇಕಮಂದಿ ಕೂಡಿದರು. ಬಲ್ಲಯ್ಯನ ಕಣ್ಣುಗಳಿಗೆ ಬಟ್ಟೆಯನ್ನು ಬಿಗಿದು ಕಟ್ಟಲಾಯಿತು. ಅಲ್ಲಿ ಕೂಡಿದ ಜನರು ಮುಷ್ಟಿಯೊಳಗೆ, ಜೇಬಿನೊಳಗೆ, ಮುಂಡಾಸಿ ನೊಳಗೆ ಅಡಗಿಸಿಕೊಂಡ ವಸ್ತುಗಳು ಏನೆಂದು ಕೇಳಿದರೆ ಬಲ್ಲಯ್ಯ ಸರಿಯಾಗಿಯೇ ಹೇಳುತಿದ್ದನು. ಜನರೆಲ್ಲ ಆಶ್ಚರ್ಯದಿಂದ ಮೂಗಿಗೆ ಬೆರಳಿಟ್ಟರು.

ಬಲ್ಲಯ್ಯನ ಅದ್ಭುತ ದೃಷ್ಟಿಶಕ್ತಿಯ ವಿಷಯ ಬಾಯಿಯಿಂದ ಬಾಯಿಗೆ ಹೋಗಿ ಅಕ್ಕಪಕ್ಕದ ಊರುಗಳಿಗೂ ಗೊತ್ತಾಯಿತು. ಬಲ್ಲಯ್ಯನ ದೃಷ್ಟಿಶಕ್ತಿ ಪ್ರದರ್ಶನದಲ್ಲಿ ಸ್ವಲ್ಪ ಹಗುರಾದ ದುಡ್ಡಿನ ಕ್ರಮವನ್ನಿಟ್ಟು ವಸೂಲುಮಾಡುತ್ತ



ಶಿವಣ್ಣನು ಮಗನೊಂದಿಗೆ ಊರೂರು ತಿರುಗಲು ತೊಡಗಿದನು. ಹಣವೂ ಸೇರತೊಡಗಿತು.

ಒಂದುದಿನ ರಾತ್ರಿ ಶಿವಣ್ಣ ತಳವೂರಿದ್ದ ಛತ್ರಕ್ಕೆ ಕಳ್ಳರು ನುಗ್ಗಿದರು. ಅವರು ನಿದ್ರಿಸಿಕೊಂಡಿದ್ದ ಬಲ್ಲಯ್ಯನನ್ನು ಎತ್ತಿಕೊಂಡು ಮಾಯವಾಗಿ ಹೋದರು. ಆ ಕಳ್ಳರು ಯಾರ ಹಣವನ್ನೂ ಮುಟ್ಟದೆ, ಬಲ್ಲಯ್ಯನನ್ನು ಮಾತ್ರ ಎತ್ತಿಕೊಂಡು ಹೋಗಲು ಬಂದವರಂತೆಯೇ ಆಯಿತು. ಅವನನ್ನು ಏಕೆ ಎತ್ತಿಕೊಂಡು ಹೋದರೆಂದು ತಿಳಿಯದೆ, ಶಿವಣ್ಣನೂ ಸೀತಮ್ಮನೂ ದುಃಖಿಸತೊಡಗಿದರು. ಆ ಸಮಯದಲ್ಲಿ ಅವರಿಗೆ ಬಲ್ಲಯ್ಯನನ್ನು ಕರೆದು ಕೊಂಡು ಬರುವಂತೆ, ಮಹಾರಾಜನ ಕಡೆಯಿಂದ ಕರೆಬಂದಿತು.

ಗಂಡ ಹೆಂಡಿರು ನಗರಕ್ಕೆ ಹೋಗಿ, ರಾಜನ ದರ್ಶನಮಾಡಿ, ನಡೆದ ಸಂಗತಿಯನ್ನು ಮೊರೆಯಿಟ್ಟು ಕೊಂಡರು.

ರಾಜನು ಅವರಿಗೆ ಸಮಾಧಾನ ಹೇಳುತ್ತ, "ನಿಮ್ಮ ಮಗನ ವಿಷಯ ಕುರಿತು ಆಗಾಗ ಸುದ್ದಿ ಬರುತ್ತಿತ್ತು. ಏನೋ ಗಾರುಡಿವಿದ್ಯೆ ಎಂದುಕೊಂಡು ಸುಮ್ಮನಿದ್ದೆವು. ಈಗ ನೋಡಿದರೆ ಏನೋ ಸತ್ಯವಿರ ಬೇಕೆನಿಸುತ್ತದೆ. ಅವನನ್ನು ತಮ್ಮ ಸ್ವಾರ್ಥಸಾಧನೆ ಗಾಗಿಯೇ ಕಳ್ಳರು ಅಪಹರಿಸಿರಬೇಕು. ನಾನು ಅವನನ್ನು ಹುಡುಕಿಸುತ್ತೇನೆ" ಎಂದನು.

ಇದು ನಡೆದ ಕೆಲವು ದಿನಗಳ ಮೇಲೆ ಒಬ್ಬ ವರ್ತಕನು ತನ್ನ ನೌಕರರೊಂದಿಗೆ ಕಾಡುದಾರಿಯಲ್ಲಿ ಪ್ರಯಾಣ ಮಾಡಿಕೊಂಡಿದ್ದನು. ದಾರಿಯಲ್ಲಿ ಕಳ್ಳರ ಗುಂಪೊಂದು ಅವರನ್ನು ಅಟಕಾಯಿಸಿತು. ಆ ಕಳ್ಳರ ನಾಯಕನು ಏರಿಕೊಂಡಿದ್ದ ಕುದುರೆಯ ಮೇಲೆ ಒಬ್ಬ ಹುಡುಗನೂ ಇದ್ದನು.

ಕಳ್ಳರ ನಾಯಕನು ವರ್ತಕನ ನೌಕರರು ಹೊತ್ತು ಕೊಂಡಿದ್ದ ಪೆಟ್ಟಿಗೆಗಳನ್ನು ಆ ಹುಡುಗನಿಗೆ ತೋರಿಸಿ, "ಆ ಪೆಟ್ಟಿಗೆಗಳಲ್ಲಿ ಧನವಿರುವ ಪೆಟ್ಟಿಗೆಯಾವುದು ?" ಎಂದು ಕೇಳಿದನು.

ಹುಡುಗನು ವರ್ತಕನ ನೌಕರಲ್ಲಿ ಒಬ್ಬನನ್ನು ತೋರಿಸಿ "ಅವನ ತಲೆಯ ಮೇಲಿರುವ ಪೆಟ್ಟಿಗೆ ಯಲ್ಲಿ ನಗಗಳು ತುಂಬಾ ಇವೆ" ಎಂದನು.

ಕಳ್ಳರ ನಾಯಕನ ಆಜ್ಞೆಯಿಂದ ಅವನ ಸಹಚರರು ಆ ಪೆಟ್ಟಿಗೆಯನ್ನು ಮಾತ್ರ ಎತ್ತಿಕೊಂಡು ಅಲ್ಲಿಂದ ತಮ್ಮ ದಾರಿ ಹಿಡಿದರು. ಅವರು ತಮ್ಮ ಸ್ಥಾನವನ್ನು ಸೇರಿ ಆ ಪೆಟ್ಟಿಗೆಯನ್ನು ತೆರೆದು ನೋಡಿದಾಗ, ಅದರೊಳಗಿದ್ದುದೆಲ್ಲವೂ ನಕಲೀ ನಗಗಳೆಂದು ಗೊತ್ತಾಯಿತು.

ಕಳ್ಳರ ನಾಯಕನು ಉರಿಯುವ ಕಣ್ಣುಗಳಿಂದ ಹುಡುಗನನ್ನು ನೋಡುತ್ತ, "ಎಂಥ ಬಲ್ಲಯ್ಯ ನೀನು ? ಇಷ್ಟು ದೊಡ್ಡ ಮಹತ್ವವಿರುವ ನಿನ್ನ ಕಣ್ಣುಗಳಿಗೆ ಯಾವುದು ಚಿನ್ನ ಯಾವುದು ನಕಲೀ ಗೊತ್ತಾಗುವುದಿಲ್ಲವೇ ? ಛೀ !" ಎಂದನು ತಿರಸ್ಕಾರದಿಂದ.

ಅದೇ ಸಮಯದಲ್ಲಿ ಥಕ್ಕನೆ ರಾಜಭಟರ ಗುಂಪು ಬಂದು ಕಳ್ಳರನ್ನು ಮುತ್ತಿಬಿಟ್ಟಿತು. ಅದಕ್ಕೆ



ಮೊದಲು ವರ್ತಕನ ವೇಷದಲ್ಲಿ ಸೇನಾನಾಯಕ ಶೂರವರ್ಮನೂ, ಅವನ ನೌಕರರ ವೇಷದಲ್ಲಿ ಸೈನಿಕರೂ ಕಳ್ಳರಿಂದ ಹಿಡಿಯಲ್ಪಟ್ಟು, ಆಮೇಲೆ ರಹಸ್ಯವಾಗಿ ಬೆಂಬತ್ತಿ ಬಂದಿದ್ದರು.

ಎಲ್ಲಾ ಕಳ್ಳರೂ ಶರಣಾಗತರಾಗುವಂತೆ ಶೂರವರ್ಮನು ಆಜ್ಞಾಪಿಸಿದನು. ಅಧಿಕ ಸಂಖ್ಯೆಯಲ್ಲಿರುವ ರಾಜಭಟರನ್ನು ನೋಡಿ ಕಳ್ಳರು ಮಾತಾಡದೆ ಬಂದಿಗಳಾದರು. ಶೂರವರ್ಮನು ಬಲ್ಲಯ್ಯನನ್ನು ತನ್ನ ಕುದುರೆಯ ಮೇಲೆ ಏರಿಸಿಕೊಂಡು, ಕಳ್ಳರನ್ನೂ ಅವರ ಸೊತ್ತುಗಳನ್ನೂ ಸಾಗಿಸಿಕೊಂಡು ರಾಜಧಾನೀ ನಗರವನ್ನು ಸೇರಿದನು.

ರಾಜನಾದ ರಘುವರ್ಮನು ಶಿವಣ್ಣ ದಂಪತಿಗಳನ್ನು ಕರೆಯಿಸಿ, "ನಮ್ಮ ಭಟರು ನಿಮ್ಮ ಮಗನನ್ನು ಕಳ್ಳರ ಕೈಯಿಂದ ರಕ್ಷಿಸಿ ಕರೆ ತಂದಿದ್ದಾರೆ. ರಾಜ್ಯದಲ್ಲಿ ಇನ್ನೂ ಕೆಲವು ಕಳ್ಳರ ಗುಂಪುಗಳಿವೆ. ಅವರು ಮತ್ತೆ ನಿಮ್ಮ ಮಗನನ್ನು ಎತ್ತಿಕೊಂಡು ಹೋಗುವ ಅಪಾಯವಿದೆ. ಆದುದರಿಂದ ಬಲ್ಲಯ್ಯ ನಮ್ಮ ರಕ್ಷಣೆಯಲ್ಲೇ ಇದ್ದು ಬೆಳೆದು ದೊಡ್ಡವನಾಗಲಿ. ನೀವು ವಾರಕ್ಕೆ ಒಂದುಸಾರಿ ಬಂದು ಮಗನನ್ನು ನೋಡಿ ಹೋಗಬಹುದು. ಆಗಬಹುದಷ್ಟೆ ? " ಎಂದನು.

ಶಿವಣ್ಣ ಸೀತಮ್ಮರು ಅದಕ್ಕೆ ಸಂತೋಷದಿಂದ ಒಪ್ಪಿದರು. ಬಲ್ಲಯ್ಯನು ರಾಜನ ಪರಿವಾರದೊಳಗೆ ಇಪ್ಪತ್ತು ವರ್ಷ ಪ್ರಾಯದ ವರೆಗೂ ಇದ್ದು ಪ್ರೌಢನಾದನು. ಈ ಮಧ್ಯೆ ರಘುವರ್ಮ ರಾಜನು ಸತ್ತುಹೋಗಿ, ಅವನ ಕುಮಾರ ಶಕ್ತಿವರ್ಮನು ರಾಜನಾದನು.

ಒಂದುದಿನ ಶಕ್ತಿವರ್ಮನು ಬಲ್ಲಯ್ಯನನ್ನು ಕರೆದು, "ಇಷ್ಟು ಕಾಲ ನೀನು ನಮ್ಮ ರಕ್ಷಣೆಯಲ್ಲಿ ಬೆಳೆದಿರುವಿ. ಓದುಬರೆಹಗಳೊಂದಿಗೆ ಯುದ್ಧ ವಿದ್ಯೆಗಳನ್ನು ಕೂಡಾ ಕಲಿತಿರುವಿ. ಜೀವನೋಪಾಯಕ್ಕೆ ನಿನ್ನದೇ ಆದ ಒಂದು ದಾರಿ ಬೇಕಷ್ಟೆ ? ಏನು ಮಾಡಬೇಕೆಂದು ನಿನ್ನ ಮನಸ್ಸಿನ ಉದ್ದೇಶ ? " ಎಂದು ಕೇಳಿದನು.





ಬಲ್ಲಯ್ಯನು ಒಂದು ಕ್ಷಣ ಆಲೋಚಿಸಿ, "ಮಹಾರಾಜರೇ, ತಾವು ಅನುಮತಿಕೊಟ್ಟರೆ, ಒಂದುಸಾರಿ ದೇಶ ಸಂಚಾರ ಮಾಡಿ ಬರಬೇಕೆಂದು ಮನಸ್ಸಾಗಿದೆ" ಎಂದನು.

ಶಕ್ತಿವರ್ಮನು ಅದಕ್ಕೆ ಒಪ್ಪಿ, ಅವನಿಗೆ ಬೇಕಾಗುವಷ್ಟು ಹಣವನ್ನು ಕೊಡಿಸಿದನು. ಬಲ್ಲಯ್ಯ ದೇಶಾಟನೆ ಮಾಡಿಕೊಂಡು ಹೋಗುತ್ತಿರಲು, ಒಂದು ಗ್ರಾಮದಲ್ಲಿರುವಾಗ ಅವನಿಗೆ ನಡೆಯಲಾಗದಂತೆ ತೀವ್ರವಾಗಿ ಜ್ವರಬಂದಿತು.

ಅವನು ಅಲ್ಲಿಯ ವೈದ್ಯನನ್ನು ನೋಡಲು ಹೋದನು. ಆಗ ಜಗನ್ನಾಥನೆಂಬ ಆ ವೈದ್ಯನು, ಹೊಟ್ಟೆ ನೋವಿನಿಂದ ಸಂಕಟಪಡುತ್ತಿರುವ ರೋಗಿಯೊಬ್ಬನ ಹೊಟ್ಟೆಯನ್ನು ಪರೀಕ್ಷೆ ಮಾಡಿಕೊಂಡಿದ್ದನು. "ಅಷ್ಟು ಕಷ್ಟಪಟ್ಟು ಪರೀಕ್ಷೆ ಮಾಡಬೇಕಾಗಿಲ್ಲ ವೈದ್ಯರೇ, ಆ ರೋಗಿಯ ಹೊಟ್ಟೆಯ ಎಡಬದಿಯಲ್ಲಿ ಒಂದು ಹುಣ್ಣಿದೆ." ಎಂದನು ಬಲ್ಲಯ್ಯ.

ವೈದ್ಯ ಜಗನ್ನಾಥನು ಅತ್ಯಾಶ್ಚರ್ಯದಿಂದ ಬಲ್ಲಯ್ಯನನ್ನು ನೋಡಿ, "ಓಹೋ! ನೀವು ಬಲ್ಲಯ್ಯನವರೆಂದು ಕಾಣುತ್ತದೆ? ನನ್ನ ಊಹೆ ತಪ್ಪಲ್ಲವಷ್ಟೆ?" ಎಂದನು.

ಹೌದೆಂದನು ಬಲ್ಲಯ್ಯ. ಜಗನ್ನಾಥ ವೈದ್ಯನು ಬಲ್ಲಯ್ಯನನ್ನು ತನ್ನ ಮನೆಯಲ್ಲೇ ಇರಲು ಹೇಳಿ, ಅವನ ಜ್ವರಕ್ಕೆ ಒಂದು ವಾರದ ವರೆಗೆ ಔಷಧಿ ಕೊಟ್ಟು ಉಪಚರಿಸಿದನು. ಆ ಸಮಯದಲ್ಲಿ ಇತರ ರೋಗಿಗಳ ರೋಗಗಳನ್ನು ಗುರುತಿಸುವುದಕ್ಕೆ ಜಗನ್ನಾಥನಿಗೆ ಬಲ್ಲಯ್ಯನಿಂದ ತುಂಬಾ ಸಹಾಯವಾಯಿತು. ಬಲ್ಲಯ್ಯನನ್ನು ಬಿಡಲು ವೈದ್ಯನಿಗೆ ಮನಸ್ಸಿರಲಿಲ್ಲ. ಒತ್ತಾಯದಿಂದ ಕೆಲವು ದಿನ ಇರಿಸಿಕೊಂಡನು. ಆಮೇಲೆ ಕಳುಹಿಸಿ ಕೊಡಬೇಕಾಯಿತು.

ಜ್ವರವು ಗುಣವಾದ ಮೇಲೆ ಬಲ್ಲಯ್ಯ ಆ ರಾಜ್ಯದ ಸರಿಹದ್ದು ಪ್ರಾಂತಕ್ಕೆ ಹೋದನು. ಅಲ್ಲಿ ಒಬ್ಬ ಉದ್ಯೋಗಸ್ಥನು, ಗಡಿಮೇರೆಯನ್ನು ದಾಟಿ ಬಂದ ಧಾನ್ಯದ ಚೀಲಗಳ ವಿವರಗಳನ್ನು ಬರೆದುಕೊಳ್ಳುತ್ತಿದ್ದನು. ಅದನ್ನು ಗಮನಿಸಿದ ಬಲ್ಲಯ್ಯನು ಆ ಉದ್ಯೋಗಸ್ಥನ ಬಳಿಗೆ ಹೋಗಿ, ಒಂದು ಗಾಡಿಯ ಕಡೆಗೆ ಕೈ ತೋರಿಸಿ, "ಅಯ್ಯಾ, ಆ ಧಾನ್ಯದ ಚೀಲಗಳೊಳಗೆ, ಧಾನ್ಯಗಳ ಮಧ್ಯದಲ್ಲಿ ತುಂಬಾ ರತ್ನಗಳಿವೆ" ಎಂದನು.

ಉದ್ಯೋಗಸ್ಥನು ರೇಗಿಕೊಳ್ಳುತ್ತ, "ಅದೇನಿಲ್ಲ. ಜಾಗ್ರತೆಯಿಂದ ಪರೀಕ್ಷಿಸಿಯೇ ಅವೆಲ್ಲಾ ಬರೀ ಧಾನ್ಯದ ಚೀಲಗಳೆಂದು ನಿರ್ಣಯಿಸಿದ್ದು. ಗೊತ್ತಿದ್ದವನ ಹಾಗೆ ಹೇಳಲಿಕ್ಕೆ ನೀನೇನು ಬಲ್ಲಯ್ಯನೆಂದು ಕೊಂಡೆಯೋ?" ಎಂದನು.

"ಹೌದು. ನಾನು ಬಲ್ಲಯ್ಯನೇ!" ಎಂದು ಬಲ್ಲಯ್ಯನು ಶಾಂತನಾಗಿ ಹೇಳಲು ಆ ಉದ್ಯೋಗಸ್ಥನು ಬೆರಗಾಗಿ ನೋಡಿದನು. ಆಮೇಲೆ ಉದ್ಯೋಗಸ್ಥನು ತನ್ನ ನೌಕರರಿಂದ

ಧಾನ್ಯದ ಚೀಲಗಳೊಳಗೆ ಶೋಧನೆ ನಡೆಸಿದಾಗ, ಧಾನ್ಯದ ನಡುವಿನಲ್ಲಿ ರತ್ನಗಳಿದ್ದುದು ನಿಜವೇ ಎಂದು ಗೊತ್ತಾಯಿತು. ಅವನು ಬಲ್ಲಯ್ಯನೊಂದಿಗೆ ಕ್ಷಮೆ ಕೇಳಿಕೊಂಡು, ಕಳ್ಳತನದಿಂದ ರತ್ನಗಳನ್ನು ಗಡಿದಾಟಿಸಿಕೊಂಡು ಹೋಗುವ ವರ್ತಕನನ್ನು ಬಂಧಿಸಿದನು.

ಅಲ್ಲಿಂದ ಬಲ್ಲಯ್ಯನು ದೇಶಾಟನೆ ಸಾಕುಮಾಡಿ ತನ್ನ ನಗರಕ್ಕೆ ಹಿಂದಿರುಗಿ ಪ್ರಯಾಣ ಮಾಡಿದನು. ಅವನು ಶಕ್ತಿವರ್ಮ ರಾಜನ ಬಳಿಗೆ ಹೋಗಿ ನಮಸ್ಕರಿಸಿ ನಿಂತನು.

"ಬಹಳದಿನ ದೇಶಾಟನೆ ಮಾಡಿದಿ. ಇನ್ನು ಹೇಳು. ಯಾವ ವೃತ್ತಿಯನ್ನು ಕೈಕೊಳ್ಳಬೇಕೆಂದು ನಿಶ್ಚಯಿಸಿರುವಿ ?" ಎಂದು ಶಕ್ತಿವರ್ಮ ರಾಜನು ಕೇಳಿದನು.

"ಮಹಾರಾಜರೇ, ನಮ್ಮ ಗಡಿ ಪ್ರಾಂತದಲ್ಲಿ ತುಂಬಾ ಕಳ್ಳ ಸಾಗಾಣಿಕೆ ನಡೆಯುವುದನ್ನು ಗಮನಿಸಿದೆನು. ನನ್ನಂಥವನಿಗೆ ಅಂತಹುದನ್ನು ತಡೆಗಟ್ಟುವುದು ಸುಲಭ. ನನಗೆ ಅದಕ್ಕೆ ಸಂಬಂಧಿಸಿದ ಉದ್ಯೋಗವನ್ನೇ ಕೊಡಿಸಿದರೆ ಪ್ರಯೋಜನವಾದೀತು" ಎಂದನು ಬಲ್ಲಯ್ಯ.

"ನಿಜ ಹೇಳಿದೆ. ನಿನ್ನ ಶಕ್ತಿಗೆ ತಕ್ಕ ಉದ್ಯೋಗ ಆದುವೇ. ನೀನಿರುವ ಪ್ರದೇಶದಲ್ಲಿ ಒಂದು ವೈದ್ಯಶಾಲೆಯನ್ನೂ ಕಟ್ಟಿಸುತ್ತೇನೆ. ಈ ಮೊದಲು ನೀನು ಒಂದು ಗ್ರಾಮದಲ್ಲಿ ಜಗನ್ನಾಥ ವೈದ್ಯನಿಗೆ ಸಹಾಯ ಮಾಡಿದ ಹಾಗೆ, ನಮ್ಮ ವೈದ್ಯಶಾಲೆಯ ವೈದ್ಯರಿಗೂ ಸಹಾಯಮಾಡಿಕೊಂಡಿರು. ಆದರಿಂದ ರೋಗಿಗಳ ಚಿಕಿತ್ಸೆ ಸುಲಭವಾಗುತ್ತದೆ." ಎಂದನು ಶಕ್ತಿವರ್ಮ.

ಬಲ್ಲಯ್ಯನು ಆಶ್ಚರ್ಯದಿಂದ, "ನಾನು ಜಗನ್ನಾಥ ವೈದ್ಯರಿಗೆ ಸಹಾಯಮಾಡಿದ ಸಂಗತಿ ನಿಮಗೆ ಹೇಗೆ ತಿಳಿಯಿತು ?" ಎಂದು ಕೇಳಿದನು.

ರಾಜನು ನಗುತ್ತ "ನಿನ್ನ ಅಪೂರ್ವ ದೃಷ್ಟಿಯ ಬೆಲೆ ನಿನಗಿಂತ ಬೇರೆಯವರಿಗೇ ಚೆನ್ನಾಗಿ ಗೊತ್ತು. ದೇಶಾಟನೆಯ ಸಮಯದಲ್ಲಿ ನಿನ್ನನ್ನು ಮತ್ತೆ ಯಾವ ಕಳ್ಳರೋ ಎತ್ತಿಕೊಂಡು ಹೋಗದ ಹಾಗೆ ನೋಡಿಕೊಳ್ಳಲು ಕೆಲವುಮಂದಿ ಗೂಢಚಾರರನ್ನು ಕಳುಹಿಸಿದ್ದೆನು" ಎಂದನು.

ಕೆಲವು ದಿನಗಳ ಮೇಲೆ ಬಲ್ಲಯ್ಯನು ಗಡಿ ಪ್ರಾಂತದ ಪರೀಕ್ಷಾಧಿಕಾರಿಯಾಗಿ ನಿಯಮಿಸಲ್ಪಟ್ಟನು. ಬಲ್ಲಯ್ಯನು ತನ್ನ ಗ್ರಾಮದಲ್ಲಿದ್ದ ಒಬ್ಬಳು ಕನ್ಯೆಯನ್ನು ಮದುವೆ ಮಾಡಿಕೊಂಡು ತಂದೆತಾಯಿಗಳೊಂದಿಗೆ, ಗಡಿ ಪ್ರಾಂತದ ಸರಿಹದ್ದು ಪ್ರದೇಶದಲ್ಲಿ, ಒಳ್ಳೆಯ ಹೆಸರಿನಿಂದ ಬಹುಕಾಲ ಸುಖಿಯಾಗಿ ಬಾಳಿದನು.



# ಬುದ್ಧಿವಂತನೇ ಸರಿ !

ವಿದರ್ಭದ ರಾಜನು ತಾನು ಬಹಳ ಬುದ್ಧಿವಂತನೆಂದು ಭ್ರಮಿಸಿಕೊಂಡಿದ್ದನು. ಆದುದರಿಂದ ಅವನು ಆಗಾಗ ಸಭಿಕರಮುಂದೆ ಅರ್ಥವೇನಿಲ್ಲದ ಪ್ರಶ್ನೆಗಳನ್ನು ಕೇಳುತ್ತಿದ್ದನು. ಎಲ್ಲರನ್ನೂ ಮಂಕುಗೊಳಿಸಿ ತಾನೇ ಏನೋ ಒಂದು ಹೇಳಿ ಗೆದ್ದಂತೆ ನಗುವನು.

ಒಂದುಸಾರಿ ಅವನು ಸಭಿಕರ ಮುಂದೆ, "ಈ ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ಬುದ್ಧಿವಂತನಾರೆಂದು ಹೇಳಿದವರಿಗೆ ಸಾವಿರ ವರಹ ಬಹುಮಾನ ಕೊಡುತ್ತೇನೆ" ಎಂದನು.

ಅನೇಕರು ರಾಜನ ಹೆಸರನ್ನೇ ಹೇಳಿದರು. "ಸುಮ್ಮನೆ ಹೇಳಿದರಾಗದು. ಉದಾಹರಣೆ ಬೇಕು" ಎಂದನು ರಾಜ.

ಆಗ ವಿದೂಷಕನು, "ಚಿಕ್ಕಂದಿನಲ್ಲೊಮ್ಮೆ ನನ್ನ ತಂದೆ ನನ್ನ ಹತ್ತಿರ, ಒಂದು ಪ್ರಶ್ನೆಗೆ ಉತ್ತರ ಕೊಡುವವನೇ ಪ್ರಪಂಚದಲ್ಲಿರುವ ಎಲ್ಲರಿಗಿಂತಲೂ ಹೆಚ್ಚಿನ ಬುದ್ಧಿವಂತನೆನಿಸುತ್ತಾನೆ ಅಂದರು" ಎಂದನು. "ಏನು ಆ ಪ್ರಶ್ನೆ ?" ಎಂದು ರಾಜನು ಕೇಳಿದನು.

"ಮನುಷ್ಯನ ಶರೀರಕ್ಕೆ ಸಾವೇ ಹೊರತು ಆತ್ಮಕ್ಕೆ ಇಲ್ಲವಷ್ಟೆ ? ನಾವು ಬಟ್ಟೆ ಬದಲಾಯಿಸಿಕೊಳ್ಳುವ ಹಾಗೆ ಆತ್ಮವು ಶರೀರವನ್ನು ಬದಲಾಯಿಸಿಕೊಳ್ಳುತ್ತದೆ. ಆದರೆ ಒಂದು ಶರೀರವನ್ನು ಬಿಟ್ಟ ಆತ್ಮ ಮತ್ತೊಂದು ಶರೀರವನ್ನು ಪ್ರವೇಶಿಸುವ ಮೊದಲು ಎಷ್ಟುಕಾಲ ವಿಶ್ರಾಂತಿ ತೆಗೆದುಕೊಳ್ಳುತ್ತದೆ? ಎಂಬುದು ನನ್ನ ತಂದೆಯ ಪ್ರಶ್ನೆ" ಎಂದನು ವಿದೂಷಕ.

ಈ ಪ್ರಶ್ನೆಗೆ ಯಾರೂ ಉತ್ತರ ಹೇಳಲಾರದೆ ಹೋದರು. ರಾಜನು ವಿದೂಷಕನನ್ನೇ ಉತ್ತರ ಹೇಳುವಂತೆ ಹೇಳಿದನು. ವಿದೂಷಕನು ಮುಖಬಾಡಿಸಿ, "ನನ್ನ ತಂದೆ ನನಗೊಬ್ಬನಿಗೇ ಉತ್ತರ ಹೇಳಿದರು. ಆ ಉತ್ತರ ನನ್ನ ವಂಶದವರಿಗೆ ಹೊರತು ಬೇರೆ ಯಾರಿಗೂ ಹೇಳ ಕೂಡದೆಂಬ ಶಾಪವಿದೆ. ತಂದೆ ಈಗ ಜೀವದಲ್ಲಿಲ್ಲ. ಈಗ ಆ ಪ್ರಶ್ನೆಗೆ ಉತ್ತರ ತಿಳಿದವನು ನಾನೊಬ್ಬನೇ. ಆದ್ದರಿಂದ ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ಬುದ್ಧಿವಂತನು ನಾನೇ!" ಎಂದನು.

ರಾಜನು ಕೋಪದಿಂದ "ನಿನಗಿಂತ ಹೆಚ್ಚಿನ ಬುದ್ಧಿವಂತರೇ ಇಲ್ಲವೇನು ?" ಎಂದು ಕೇಳಿದನು.

"ಅದೇನು ಹೀಗೆ ಕೇಳುವಿರಿ ? ನನ್ನಂಥ ಬುದ್ಧಿವಂತನನ್ನು ವಿದೂಷಕನೆಂಬ ಹೆಸರಿನಲ್ಲಿ ಸೇವಕನನ್ನಾಗಿ ಇಟ್ಟುಕೊಂಡಿದ್ದೀರೆಂದರೆ, ನನಗಿಂತ ನೀವೇ ಹೆಚ್ಚಿನ ಬುದ್ಧಿವಂತರೆಂದೇ ಅರ್ಥವಲ್ಲವೇ?" ಎಂದನು ವಿದೂಷಕ ವಿನಯದಿಂದ.

ರಾಜನು ಸಂತೋಷಪಟ್ಟು, ವಿದೂಷಕನು ಬುದ್ಧಿವಂತನೆಂದು ಮೆಚ್ಚಿ, ಅವನಿಗೆ ಸಾವಿರ ವರಹ ಬಹುಮಾನ ಕೊಟ್ಟನು.






ಕೃಷ್ಣನ ಮಾತುಕೇಳಿ ಮೃದಂಗಕೇಸರಿ ಹುಬ್ಬು ಹಾರಿಸಿ ತಲೆ ಕುಣಿಸುತ್ತ, "ಓಹೋ ! ಹೀಗೆ ಹೇಳಿ ತಪ್ಪಿಸಿಕೊಳ್ಳಲು ನೋಡುವಿಯಾ ? ನಾನು ಬಿಡಲಾರೆ. ನಿನ್ನ ಮುರಳೀ ಗಾನ ದೊಡ್ಡದೋ ನನ್ನ ಮೃದಂಗ ಬಾಜನ ದೊಡ್ಡದೋ ನೋಡಿಬಿಡಲೇ ಬೇಕು. ತೆಗೀ ನಿನ್ನ ಮುರಳಿ" ಎಂದನು.

ಕೃಷ್ಣನು "ಇದೇನು ಕಷ್ಟಬಂತಪ್ಪಾ" ಎಂದು ಗೊಣಗುತ್ತ, ಮುರಳಿಯನ್ನು ತೆಗೆದು ನಡುಗುವ ಕೈಗಳಿಂದ ತುಟಿಗೆ ಹೊಂದಿಸಿದ್ದೇ ತಡ, ಒಮ್ಮೆಗೇ ಅತಿ ಮಧುರವಾದ ನಾದ ಮಿಡಿಯ ತೊಡಗಿತು. ಮೃದಂಗ ಕೇಸರಿ ಅವಸರವಸರವಾಗಿ ತನ್ನ ಮದ್ದಳೆಯನ್ನು ಬಾರಿಸಲು ಮೊದಲು ಮಾಡಿದನು, ಆ ನಾದಕ್ಕೆ ಸರಿಯಾಗುವಂತೆ ಕೃಷ್ಣನು ಯಮುನಾ ಕಲ್ಯಾಣಿ ರಾಗವನ್ನು ಹಿಡಿದು ನಾದ ಹೊರಡಿಸುತ್ತಾ, ಮೃದಂಗಕೇಸರಿಯನ್ನು ತಟಪಟಾಯಿಸಿ ಕೊಂಡೇ, ಇದ್ದಕ್ಕಿದ ಹಾಗೆ ಹಂಸಧ್ವನಿಯನ್ನು ಲಂಘಿಸಿಕೊಂಡು ಅದ್ಭುತವಾಗಿ ನಾದ ಹೊರಡಿಸ ತೊಡಗಿದನು. ಅವರಿಬ್ಬರ ನಾದ ತರಂಗಗಳಲ್ಲಿ ಸುತ್ತಲಿನ ಕಲ್ಮರ ಗಿಡಗಳೆಲ್ಲ ನರ್ತಿಸುವಂತಾಯಿತು. ಸಾಕ್ಷಾತ್ ಮೃದಂಗಕೇಸರಿಯೂ ಪರವಶನಾಗಿ ಬಾರಿಸುವುದನ್ನು ಬಿಟ್ಟು ನರ್ತನ ಮಾಡಲು ಮೊದಲು ಮಾಡಿದನು, ಅವನ ಪಾದ ಧ್ವನಿಗಳೇ ಮೃದಂಗದಂತೆ ಧ್ವನಿಸಿತು.

ಕೃಷ್ಣನು ಹಂಸಧ್ವನಿ ರಾಗವನ್ನು ಚಿತ್ರವಿಚಿತ್ರ ಗತಿಗಳಿಂದ ಏರಿಳಿದೇರಿಸಿ ನುಡಿಸುತ್ತಿದ್ದಂತೆ ನಲಿದಾಡುತ್ತಿದ್ದ ಮೃದಂಗಕೇಸರಿ ಪ್ರತ್ಯಕ್ಷ ವಿಘ್ನೇಶ್ವರನಾಗಿ ಸೊಂಡಿಲಾಡಿಸಿ ಬೀಸಿಕೊಂಡು, ಗುಂಡೋದರವನ್ನು ತಟ್ಟಿಕೊಂಡು ತಾಂಡವವಾಡಿ ಕೊಂಡಿದ್ದನು. ಅವನ ಮದ್ದಳೆ ಇಲಿಯಾಗಿ ಹಾರಿಹಾರಿ ಕುಣಿಯುತ್ತಿತ್ತು. ತನಗೆ ಪ್ರಿಯವಾದ ಹಂಸಧ್ವನಿ ರಾಗಕ್ಕೆ ವಿಘ್ನೇಶ್ವರನು ಆನಂದ ಪುಳಕಿತನಾಗಿ ತಾಂಡವಿಸುತ್ತಾ ಬಳಲಿ ಹೋಗುವುದನ್ನು ನೋಡಿ ಕೃಷ್ಣನು ತಟ್ಟನೆ ಮುರಳೀ ವಾದನವನ್ನು ನಿಲ್ಲಿಸಿ, ವಿಘ್ನೇಶ್ವರನು ಬೀಳದಂತೆ ತಬ್ಬಿ ಹಿಡಿದುಕೊಂಡು, "ಪಾರ್ವತೀ

೧೩. ಬೆಂಬಿಡದ ವಿನಾಯಕ ಚತುರ್ಥಿ



ನಂದನಾ, ಮತ್ತೆ ಬೋರ್ಲಬಿದ್ದುಬಿಟ್ಟರೆ ನಿನ್ನ ಅಮ್ಮ ಮಹಾ ಕೋಪದಿಂದ ಮುರಳೀಗಾನವನ್ನು ಯಾರೂ ಕೇಳಕೂಡದೆಂದು ಶಾಪ ಕೊಡುವಳೆಂದು ಹೆದರಿ ಹಿಡಿದೆನಪ್ಪಾ, ವ್ಯತ್ಯಾಸವಾಗಿ ತಿಳಿದು ಬಿಡಬೇಡವೋ ಲಂಬೋದರಾ !" ಎಂದನು.

ವಿಘ್ನೇಶ್ವರನು ನಿಂತು ಶಾಂತನಾಗಿ, "ಕೃಷ್ಣಾ, ನಿನ್ನ ಮುರಳೀಗಾನವನ್ನು ಕೇಳಬೇಕೆಂತಲೇ ಹೀಗೆ ಬಂದೆನು. ಈಗ ನಮ್ಮ ಕೃಷ್ಣವಿನಾಯಕೀಯವು ನಿಜಕ್ಕೂ ಸುಂದರಕಾಂಡವಾಯಿತು !" ಎಂದನು.

"ಅದೇನಾದರೂ ಪಾಪ, ನಿನ್ನ ವಾಹನದ ಪ್ರಾಣಿ ಮದ್ದಳೇ ಪೆಟ್ಟು ಚೆನ್ನಾಗಿಯೇ ತಿಂದಿತು !" ಎಂದು ಕೃಷ್ಣನು ಇಲಿಯ ಬೆನ್ನನ್ನು ಸವರಿದನು.

"ತೃಪ್ತಿಯಾಯಿತು ಕೃಷ್ಣಾ. ಇನ್ನೊಂದು ಮುಖ್ಯ ವಿಷಯ. ನಿನ್ನ ದುಷ್ಟ ಮಾವ ಕಂಸನಿಗೆ ಅಂತ್ಯಕಾಲವು ಸಮೀಪಿಸಿತು. ಧನುರ್ಯಾಗದ ನೆವನದಲ್ಲಿ ನಿನ್ನನ್ನು ಕರೆದುಕೊಂಡು ಬರಲು ಅಕ್ರೂರನನ್ನು ಕಳುಹಿಸುತ್ತಾನೆ. ಹೋಗದಿರಬೇಡ. ನಿನಗೆ ವಿಜಯವಾಗಿ ಯಾದವರಿಗೆ ಬೆಳಗಾಗಲಿ !" ಎಂದನು ವಿನಾಯಕ.

"ಎಲ್ಲಾ ನಿನ್ನದಯೆ,!" ಎಂದು ಕೃಷ್ಣನು ಕೈ ಜೋಡಿಸಿ ವಿನಾಯಕನಿಗೆ ನಮಸ್ಕರಿಸಿದನು.

"ನನ್ನದಯೆ ಇದರಲ್ಲೇನಿಲ್ಲ. ನೀನು ಅವತಾರ ಮೂರ್ತಿ ಕೃಷ್ಣಾ. ನಿನ್ನ ಲೀಲೆ ಅನ್ನು. ನೀನು ಧನುರ್ಯಾಗಕ್ಕೆ ಹೋದಾಗ, ಅಪ್ಸರೆ ಅರ್ಕಳ ನನಪಿದೆಯಷ್ಟೆ ? ಅವಳು ಕುಬ್ಜೆಯ ರೂಪದಲ್ಲಿ ನಿನ್ನ ದಾರೀ ಕಾದು ಕೊಂಡಿದ್ದಾಳೆ. ಮರೆಯದೆ ಅನುಗ್ರಹ ತೋರಿಸಿಬಿಡು" ಎಂದು ಹೇಳಿ ವಿಘ್ನೇಶ್ವರನು, ಇಲಿಯ ಮೇಲೆ ಏರಿ ಕುಳಿತು ರೊಯ್ಯನೆ ಆಕಾಶಮಾರ್ಗದಲ್ಲಿ ಅಂತರ್ಧಾನನಾದನು.

ಅಂದ ಹಾಗೆಯೇ ಅಕ್ರೂರನು ಬಂದು ಕಂಸನ ಆಹ್ವಾನವನ್ನು ತಿಳಿಸಿ, ಕೃಷ್ಣಬಲರಾಮರನ್ನು ರಥದ ಮೇಲೆ ಮಧುರಾಪುರಕ್ಕೆ ಕರೆದುಕೊಂಡುಹೋದನು. ಅಲ್ಲಿಯ ಬೀದಿಯಲ್ಲಿ ಅಷ್ಟವಕ್ರತೆಗಳಿಂದಿರುವ ಕುಬ್ಜೆ ಕೃಷ್ಣನ ಇದಿರಿಗೆ ಬಂದು ಅವನ ಪಾದಕ್ಕೆ ನಮಸ್ಕಾರ ಮಾಡಿ, ಅವನ ಶರೀರಕ್ಕೂ ಬಲರಾಮನ ಶರೀರಕ್ಕೂ ದಿವ್ಯಚಂದನವನ್ನು ಪೂಸಿದಳು. ಹೂವಿನ ಮಾಲೆಗಳಿಂದ ಅವರಿಬ್ಬರನ್ನೂ ಅಲಂಕರಿಸಿದಳು. ಆಮೇಲೆ ಅವಳು ಬಾಗಿ ನಮಸ್ಕರಿಸಿದಾಗ, ಕೃಷ್ಣನು ಅವಳನ್ನು ಎರಡು ಕೈಗಳಿಂದಲೂ ಹಿಡಿದು ಮೇಲೆತ್ತಿದೊಡನೆಯೇ ಅವಳ ಕುಬ್ಜಾರೂಪವು ಮಾಯವಾಯಿತು. ಅವಳು ಅರ್ಕಳೆಂಬ ಹೆಸರಿನ ಅಪ್ಸರಸಿಯಾಗಿದೇವಲೋಕಕ್ಕೆ ಹೊರಟುಹೋದಳು.

ಕೃಷ್ಣಬಲರಾಮರನ್ನು ಕೊಲ್ಲಲು ಕಂಸನು ಧನುರ್ಯಾಗದಲ್ಲಿ ಅನೇಕ ಉಪಾಯಗಳನ್ನು ಮಾಡಿದ್ದನು. ಅವುಗಳನ್ನೆಲ್ಲಾ ಕೃಷ್ಣಬಲರಾಮರು ಭಗ್ನಗೊಳಿಸಿ ಬಿಟ್ಟರು. ಕಡೆಗೆ ಕೃಷ್ಣನು ಕಂಸನನ್ನು ಸಿಂಹಾಸನದಿಂದ ಹಿಡಿದೆಳೆದು ಉರುಳಿಸಿ ಗುದ್ದಿ ಕೊಂದುಬಿಟ್ಟನು. ಆಮೇಲೆ ಕೃಷ್ಣನು ದೇವಕೀ



ವಸುದೇವರನ್ನು, ಕಾರಾಗೃಹದಿಂದ ಕರೆದುಕೊಂಡು ಬಂದು ಸಿಂಹಾಸನದಲ್ಲಿ ಕೂಡಿಸಿದನು.

ಮುಂದೆ ಕೃಷ್ಣಬಲರಾಮರು ಬೆಳೆದು ದೊಡ್ಡವರಾದರು. ಅನೇಕ ದುಷ್ಟರನ್ನೂ, ರಾಕ್ಷಸರನ್ನೂ ಕೊಂದು ಕೃಷ್ಣನು ಅನೇಕರ ವೈರವನ್ನೂ, ಸ್ನೇಹವನ್ನೂ ಗಳಿಸುತ್ತಾ ಪ್ರಸಿದ್ಧನಾದನು. ಅನೇಕ ರಾಕ್ಷಸರು ಕೃಷ್ಣನ ಕೈಯಲ್ಲಿ ಸತ್ತರು. ಸಮುದ್ರದೊಳಗೆ ತೂರಿಕೊಂಡಿರುವಂತೆ ದ್ವಾರಕಾ ಎಂಬ ನಗರವು ಕೃಷ್ಣನಿಂದ ನಿರ್ಮಿಸಲ್ಪಟ್ಟಿತು. ಅಣ್ಣನಾದ ಬಲರಾಮನನ್ನು ಯಾದವರಿಗೆ ಒಡೆಯನಾಗಿರಬೇಕೆಂದು ರಾಜ್ಯಾಭಿಷೇಕ ಮಾಡಿಸಿದನು ಕೃಷ್ಣ.

ಈ ನಡುವೆ ಕೃಷ್ಣನಿಗೆ ರುಕ್ಮಿಣಿಯೊಂದಿಗೆ ವಿವಾಹವೂ ಆಯಿತು. ಹೀಗೆ ಕೃಷ್ಣನಿಗೆ ಸಮಸ್ತ ಸಂಪತ್ತುಗಳು ಬಂದಿದ್ದರೂ, ಅವನು ತನ್ನ ಮೂಲ ವೃತ್ತಿಯನ್ನು ಬಿಡಲಿಲ್ಲ. ಎಂದಿನಂತೆ ಹಸುಗಳನ್ನು ಕಾಯುತ್ತ, ಹಾಲು ಹಿಂಡುತ್ತ ಗೋಪಾಲಕೃಷ್ಣನಾಗಿಯೇ ದ್ವಾರಕೆಯಲ್ಲಿದ್ದನು. ರಾಜಕಾರ್ಯಭಾರಗಳೆಲ್ಲ ಬಲರಾಮನದೇ. ಲೀಲಾವಿನೋದಗಳೇ ಕೃಷ್ಣನ ಮುಖ್ಯ ಕಾರ್ಯವೆನ್ನಬೇಕು.

ದ್ವಾರಕಾನಗರದ ಪಕ್ಕದಲ್ಲಿ ಸತ್ರಾಜಿತ್ತು ಎಂಬ ಪ್ರಮುಖನೊಬ್ಬನು ರಾಜನ ಹಾಗೆ ಒಂದು ಸಂಸ್ಥಾನವನ್ನು ಏರ್ಪಡಿಸಿಕೊಂಡು ಭೋಗಭಾಗ್ಯಗಳಿಂದ ಮೆರೆಯುತ್ತಿದ್ದನು. ತಾನು ಸೂರ್ಯವಂಶದಕ್ಷತ್ರಿಯನೆಂದು ಸಗರ್ವದಿಂದ ಹೇಳಿಕೊಳ್ಳುತ್ತ, ಸ್ವತಃ ಸೂರ್ಯೋಪಾಸಕನಾಗಿ ಸೂರ್ಯನನ್ನು ಧ್ಯಾನಿಸಿ ದೊಡ್ಡ ತಪಸ್ಸನ್ನೇ ಮಾಡಿದನು. ಸೂರ್ಯನು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಶಮಂತಕಮಣಿ ಎಂಬ ದೊಡ್ಡದೊಂದು ವಜ್ರವನ್ನು ಅವನಿಗೆ ಪ್ರಸಾದಿಸಿದನು.

ಆ ಶಮಂತಕಮಣಿಯಿಂದ ಹೊರಡುವ ಕಾಂತಿ ಕಿರಣಗಳು ಬಂಗಾರದ ಹರಳುಗಳಾಗಿ ಪ್ರತಿದಿನವೂ ಅವನಿಗೆ ಅಪಾರವಾಗಿ ಬಂಗಾರವನ್ನು ಕೊಡುತ್ತಿದ್ದಿತು. ಅದರಿಂದ ಇನ್ನಷ್ಟು ಹೆಚ್ಚಳಗೊಂಡ ಸತ್ರಾಜಿತ್ತು ಪ್ರಮುಖರನೇಕರಿಗೆ ಆಹ್ವಾನಗಳನ್ನು ಕಳುಹಿಸಿ, ಅವರ ಮುಂದೆ ಶಮಂತಕಮಣಿಯನ್ನು ತೋರಿಸಿ, ಅದರ ಪ್ರಭಾವವನ್ನು ವರ್ಣಿಸುತ್ತ ಸಂತೋಷದಿಂದ ಉಬ್ಬಿಕೊಳ್ಳುತ್ತಿದ್ದನು. ಕೃಷ್ಣನಿಗೂ ಆಹ್ವಾನ ಕಳುಹಿಸದಿರಲಿಲ್ಲ. ಆದರೆ ಅವನ ಹೆಮ್ಮೆಯ ವಿಷಯಕ್ಕೆ ಬೆಲೆ ಕೊಡದ ಕೃಷ್ಣನು ಅವನ ಆಹ್ವಾನದಂತೆ ಬರಲಿಲ್ಲ. ಮರ್ಯಾದೆಗಾಗಿ ಸಮಯವಿದ್ದಾಗ ಬರುವೆನೆಂದು ಸಮಾಚಾರ ಮಾತ್ರ ಕಳುಹಿಸಿದನು. ಗರ್ವಿಷ್ಠನಾದ ಸತ್ರಾಜಿತ್ತುವಿಗೆ ಯಾದವ ಕುಲದ ಕೃಷ್ಣನ ಮೇಲೆ ಒಳ್ಳೆಯ ಅಭಿಪ್ರಾಯವೇನಿರಲಿಲ್ಲ. "ಅವನು ಬರದಿದ್ದರೇನಂತೆ? ಆ ಕಳ್ಳ ಕೃಷ್ಣ ಬಾರದಿದ್ದರೇನೇ ಕ್ಷೇಮ. ಏನೋ ಯಾದವಪ್ರಮುಖನೆಂಬ ಮರ್ಯಾದೆಗೆ ಆಹ್ವಾನ ಕಳುಹಿಸಿದೆ, ಹೋಗಲಿ" ಎಂದುಕೊಂಡನು.



ಈ ಸತ್ರಾಜಿತ್ತುವಿಗೆ ಸತ್ಯಭಾಮಾದೇವಿ ಎಂಬ ಅಪೂರ್ವಸುಂದರಿಯಾದ ಮಗಳಿದ್ದಳು. ಶಮಂತಕ ಮಣಿಯೊಂದಿಗೆ ಸತ್ಯಭಾಮೆಯ ಸೌಂದರ್ಯವೂ ಖ್ಯಾತಿಗೊಂಡಿತ್ತು. ಜರಾಸಂಧನಂತಹ ರಾಜಾಧಿರಾಜರು ಕೂಡಾ ಸತ್ಯಭಾಮೆಯ ಮನವೊಲಿಸಿ ಮದುವೆಯಾಗಬೇಕೆಂದು ಕಾದುಕೊಂಡಿದ್ದರು.

ಸತ್ಯಭಾಮೆ ವಿಘ್ನೇಶ್ವರನ ಮಹಾ ಭಕ್ತೆಯಾದುದರಿಂದ, ಪ್ರತಿ ವಿನಾಯಕಚೌತಿಯ ದಿನವೂ, ವಿನಾಯಕನನ್ನು ಭಕ್ತಿಶ್ರದ್ಧೆಗಳಿಂದ ಪೂಜಿಸಿ, ಕೃಷ್ಣನನ್ನು ತನ್ನ ಪತಿಯಾಗಿ ಮಾಡಬೇಕೆಂದು ಪ್ರಾರ್ಥಿಸುತ್ತಿದ್ದಳು. ಕೃಷ್ಣನು ಆ ದಾರಿಯಾಗಿ ಬಂದಾಗಲೆಲ್ಲಾ ಅರಮನೆಯ ಮಾಳಿಗೆಯ ಮೇಲೆ ನಿಂತುಕೊಂಡು, ಅವನನ್ನು ನೋಡುತ್ತ, ಕಡೆಗೆ ನಿಡುಸುಯ್ದು ವಿಘ್ನೇಶ್ವರನ ಮುಂದೆ ಅಡ್ಡಬಿದ್ದು, ತನ್ನ ಆಸೆ ಫಲಿಸುವಂತೆ ಮಾಡೆಂದು ಬೇಡಿಕೊಳ್ಳುತ್ತಿದ್ದಳು. ತನ್ನ ಕುಮಾರಿಯ ಮನಸ್ಸು ಗೊತ್ತಿದ್ದರೂ ಸತ್ರಾಜಿತ್ತು ತಿಳಿಯದವನಂತೆಯೇ ಇದ್ದನು. ಒಂದು ದಿನ ಸತ್ಯಭಾಮೆ ವಿಘ್ನೇಶ್ವರನ ಮುಂದೆ ಕಣ್ಣು ಮುಚ್ಚಿ ಧ್ಯಾನಿಸಿಕೊಂಡಿರುವ ಚೆಂದ ನೋಡಿ ಸತ್ರಾಜಿತ್ತು,

"ಏಕೆ ಮಗಳೇ ಇಂತಹ ಧ್ಯಾನ? ಪ್ರತ್ಯಕ್ಷ ದೈವವಾದ ಸೂರ್ಯಭಗವಾನನ ಅನುಗ್ರಹವು ನಮ್ಮ ಮೇಲಿರುವಾಗ, ಲಂಬೋದರನ ಮುಂದೆ ಬಾಗುವ ಅಗತ್ಯ ಏನು ಬಂತು ನಿನಗೆ?" ಎಂದನು.

ಸತ್ಯಭಾಮೆ ತಟಕ್ಕನೆದ್ದು, "ಹಾಗೆ ಮಾತ್ರ ಹೇಳಬೇಡಿ ಅಪ್ಪಾ, ಮನೋವಾಂಛೆಗಳನ್ನು ಸುಲಭವಾಗಿ ಈಡೇರಿಸಬಲ್ಲ ದೇವನು ವಿಘ್ನೇಶ್ವರನೊಬ್ಬನೇ ಎಂದು ನಂಬಿದ್ದೇನೆ.!" ಎಂದಳು.

"ಏನದು ನಿನ್ನ ಮನೋವಾಂಛೆ? ರುಕ್ಮಿಣಿಯೊಂದಿಗೆ ಪಾಲು ಹಂಚಿಕೊಳ್ಳುವುದು ತಾನೇ?" ಎಂದನು ವ್ಯಂಗ್ಯಭಾವದಲ್ಲಿ ಸತ್ರಾಜಿತ್ತು. "ಪಾಲು ಹಂಚಿಕೊಳ್ಳುವವಳೇ ನಾನು? ಕೃಷ್ಣನನ್ನು ನನ್ನ ಅಧೀನದಲ್ಲೇ ಇಟ್ಟುಕೊಳ್ಳುತ್ತೇನೆ" ಎಂದಳು ಸತ್ಯಭಾಮೆ.

ಸತ್ಯಭಾಮೆ ಹಠಗಾರಳೆಂದು ಸತ್ರಾಜಿತ್ತುವಿಗೆ ಗೊತ್ತಿದ್ದಿತು. ಆದರೂ ತನ್ನ ಮಗಳು ಕೇವಲ ಮುಗ್ಧಳೆಂದೂ, ಬೆಳೆದ ಮೇಲೆ ಬುದ್ಧಿ ತಂದುಕೊಳ್ಳುವಳೆಂದೂ ತನಗೆ ತಾನೇ ಸಮಾಧಾನ ಹೇಳಿಕೊಂಡನು ಸತ್ರಾಜಿತ್ತು.

ಇದು ನಡೆದ ಮಾರಣೇ ದಿನವೇ ಕೃಷ್ಣನು ಅಕಸ್ಮಾತ್ತಾಗಿ ಸತ್ರಾಜಿತ್ತುವಿನ ಬಳಿಗೆಬಂದು, "ನಿಮ್ಮ ಆಹ್ವಾನದಂತೆ ಬರಲಾಗಲಿಲ್ಲ. ಈ ದಿನ ಸಮಯ ಸಿಕ್ಕಿತು" ಎಂದು ಮಾತಾಡುತ್ತ ಕುಳಿತನು. ಅವನು ಬಂದಿರುವ ಸಂಗತಿ ತಿಳಿದು ಸತ್ಯಭಾಮೆ ಸಂಭ್ರಮಗೊಂಡು, ಸ್ವಲ್ಪ ಶೃಂಗಾರ ಸರಿಮಾಡಿಕೊಂಡು ಏನೋ ನೆವನ ಹಿಡಿದು ಅವರ ಮುಂದೆ ಬಂದಾಗ, ಆಗಲೇ ಕೃಷ್ಣನು ಹೊರಟುಹೋಗಿಯಾಗಿತ್ತು. ನಿರಾಶೆಯಾಯಿತು ಸತ್ಯಭಾಮೆಗೆ.

ಕೃಷ್ಣನನ್ನು ಕಾಣದೆ ತಂದೆಯನ್ನು ನೋಡಿದಳು. ಸತ್ರಾಜಿತ್ತು ಶಮಂತಕಮಣಿಯನ್ನು ಮುಷ್ಟಿಯೊಳಗೆ ಭದ್ರವಾಗಿ ಹಿಡಿದುಕೊಂಡು ಕೃಷ್ಣನು ಹೋದ ದಿಕ್ಕನ್ನೇ ದಿಗಿಲಿನಿಂದ ನೋಡುತ್ತಾ ನಿಂತಿದ್ದನು.

ಸತ್ಯಭಾಮೆ ತಂದೆಯನ್ನು ನೋಡಿ, "ಏನಿದು ಅಪ್ಪಾ? ಹಾಗೆ ನೋಡುತ್ತಾ ನಿಂತಿದ್ದೀರಲ್ಲಾ? ಬಂದ ಆ ಮಹಾನುಭಾವನು ನನ್ನನ್ನು ತನಗೆ ಕೊಡುವಂತೆ ಕೇಳಲಿಲ್ಲವಷ್ಟೆ?" ಎಂದಳು.

"ಹಾಗೊಂದು ವೇಳೆ ಕೇಳಿದ್ದರೂ ನಾನು ಲಕ್ಷ್ಯ ಮಾಡುತ್ತಿದ್ದಿಲ್ಲ. ಅವನು ಏನು ಕೇಳಿದನು ಗೊತ್ತೇ? ಈ ಶಮಂತಕಮಣಿಯನ್ನು ಕೊಡುವಂತೆ ಕೇಳಿದ." ಎನ್ನಲು, ಸತ್ಯಭಾಮೆ "ನೀವು ಇದನ್ನು ತೋರಿಸಿ ಇದರ ಮಹಿಮೆಗಳನ್ನು ಅವನಿಗೆ ಹೇಳಿದಿರಿ, ಹೌದಾ?" ಎಂದಳು.

"ಹೌದು, ಹೇಳಿದೆ. ಅದಕ್ಕೆ ಈ ಮಣಿ ತನ್ನಂಥವನ ಹತ್ತಿರ ಇದ್ದರೆ ಪ್ರಜೆಗಳಿಗೆಲ್ಲಾ ಶ್ರೇಯಸ್ಸಾಗುವ ಹಾಗೆ ಏನೇನೋ ಮಾಡುತ್ತಾನಂತೆ ಅವನು!" ಎಂದನು ಸತ್ರಾಜಿತ್ತು.

ಸತ್ಯಭಾಮೆ ಹುಸಿಗೋಪದಿಂದ, "ಅಂತೂ ನನಗಿಂತ ನಿಮಗೆ ಈ ಮಣಿಯೇ ಹೆಚ್ಚಿನದಾಯಿತು!" ಎಂದು ಸರಸರನೆ ಅಲ್ಲಿಂದ ಹೊರಟುಹೋಗ ತೊಡಗಿದಳು. ಸತ್ರಾಜಿತ್ತು ಅವಳನ್ನು ತಡೆದು, ಸಮಜಾಯಿಸುತ್ತ, "ಹಾಗೆ ಅಂದುಕೊಳ್ಳಬೇಡಮ್ಮಾ, ಆ ಕೃಷ್ಣನ ದುರಾಶೆಗೆ ಅಸಹ್ಯಬಂತು. ಅಷ್ಟೇ. ನಿನಗೂ ಈ ಮಣಿಗೂ ಎಲ್ಲಿಯ ಸಾಮ್ಯ?" ಎಂದು ಮಂಗಾಡಿಸಿದನು.

"ಕೃಷ್ಣನು ಈ ಮಣಿ ಕೊಡುವ ಬಂಗಾರವನ್ನು ತಾನೇ ಅನುಭವಿಸುತ್ತೇನೆಂದು ಹೇಳಲಿಲ್ಲವಷ್ಟೆ? ಹಾಗಿರುವಾಗ ಅವನದು ದುರಾಶೆ ಹೇಗಾಗುತ್ತದೆ? ಕೃಷ್ಣನಂಥವನು ಕೇಳಿದರೆ ಸಂತೋಷದಿಂದ ಕೊಟ್ಟು ಬಿಡುವುದೇ ಒಳ್ಳೇದಲ್ಲವೇನು?" ಎಂದಳು



ಸತ್ಯಭಾಮೆ. ಈ ಮಾತು ಕೇಳಿ ಇವಳೇ ಈ ಮಣಿಯನ್ನು ಕದ್ದು ಕೃಷ್ಣನಿಗೆ ಕೊಡುವಳೇನೋ ಎಂದು ಸತ್ರಾಜಿತ್ತುವಿಗೆ ಭಯವಾಯಿತು. ಅವನು ಕಂಪಿಸುತ್ತ, "ಎಷ್ಟು ಮಾತ್ರಕ್ಕೂ, ನಾನು ಜೀವದಿಂದಿರುವಾಗ ಈ ಮಣಿಯನ್ನು ಯಾರಿಗೂ ಕೊಡಲಾರೆ. ಇದು ನನ್ನ ಪ್ರಾಣ! ನನ್ನ ಸರ್ವಸ್ವವೂ ಇದೇ! ತಿಳಿದುಕೋ!" ಎಂದು ಗಟ್ಟಿಯಾಗಿ ಕೂಗಿ ಹೇಳಿದನು.

ಸತ್ಯಭಾಮೆ ಅಸಹ್ಯಭಾವದಿಂದ, "ಹೌದು, ಹೌದು. ಈ ಮಣಿಯೇ ನಿಮಗೆ ದೊಡ್ಡದು. ನನಗಿಂತಲೂ ಬಹುದೊಡ್ಡದು! ಹುಂ, ಆ ಶಮಂತಕ ಮಣಿ ದೊಡ್ಡದೋ ನಾನು ದೊಡ್ಡದೋ ಎಂಬುದನ್ನು ಆ ಕೃಷ್ಣನೇ ನಿರೂಪಿಸಬೇಕು" ಎಂದು ತಂದೆಯನ್ನು ದುರದುರು ನೋಡಿ, ಸರಸರನೆ ಹೊರಟುಹೋದಳು.

ಕೆಲವು ದಿನಗಳ ಮೇಲೆ ವಿನಾಯಕಚತುರ್ಥಿ ಬಂದಿತು. ಸತ್ಯಭಾಮೆ ಯಥಾವಿಧಿಯಾಗಿ ವಿನಾಯಕ



ನನ್ನು ಅರ್ಚಿಸಿ, ಆ ದಿನ ಸಾಯಂಕಾಲದಲ್ಲಿ ಪಲ್ಲಕಿಯಲ್ಲಿ ಕುಳಿತುಕೊಂಡು, ಬೋಯಿಗಳಿಗೆ ದ್ವಾರಕಾ ನಗರಕ್ಕೆ ಹೋಗಲು ಹೇಳಿದಳು.

ಸಂಜೆಯಾದಂತೆ ಆಕಾಶದಲ್ಲಿ ದಟ್ಟವಾಗಿ ಮೋಡ ಕವಿಯ ತೊಡಗಿತು. ಕತ್ತಲೆಯಾಗುವ ಹೊತ್ತಿನಲ್ಲಿ ಕೃಷ್ಣನು ಹಸುವಿನ ಹಾಲು ಹಿಂಡಲು ತೊಡಗಿದನು. ಒಮ್ಮೆಗೇ ಆಕಾಶದಲ್ಲಿ ಮೋಡವು ಬಿಟ್ಟು ಹೋಗಿ ಚತುರ್ಥೀ ಚಂದ್ರಬಿಂಬವು ಹಾಲಿನ ಪಾತ್ರದಲ್ಲಿ ತಳಕ್ಕನೆ ಹೊಳೆಯಿತು! ಕೃಷ್ಣನು ನೋಡಿದ ಮರುಕ್ಷಣದಲ್ಲೇ ಮೋಡ ಕವಿದು ಚಂದ್ರಬಿಂಬ ಮಾಯವೂ ಆಯಿತು!

ವಿನಾಯಕ ಚತುರ್ಥಿಯ ದಿನ ಚಂದ್ರನು ಕಣ್ಣಿಗೆ ಬಿದ್ದುದನ್ನು ನೋಡಿ ಕೃಷ್ಣನ ಮೈಜುಮು ಗುಟ್ಟಿತು. ತನ್ನೊಳಗೇ ನೊಂದು ಕೊಳ್ಳುತ್ತ ಕೃಷ್ಣನು ಪೂಜಾ ಮಂದಿರಕ್ಕೆ ಹೋಗಿ, ಅಕ್ಷತೆಕಾಳನ್ನು ತಲೆಯಮೇಲೆ ಚೆಲ್ಲಿಕೊಂಡು, ವಿಘ್ನೇಶ್ವರನ ಮುಂದೆನಿಂತು ಕಣ್ಣು ಮುಚ್ಚಿ "ದೇವಾ ಪ್ರತಿಬಿಂಬವೇ ಆದರೂ ಚಂದ್ರನನ್ನು ನೋಡಿ ಬಿಟ್ಟೆ! ಎಲ್ಲಾ ನಿನ್ನ ದಯೆ!" ಎಂದು ಧ್ಯಾನಿಸಿದನು.

ಆಗ ವಿಘ್ನೇಶ್ವರ ವಿಗ್ರಹದೊಳಗಿಂದ "ಕೃಷ್ಣಾ, ಹೆದರಬೇಡ. ನೋಡಬೇಕೆಂದೇನೂ ನೀನು ನೋಡಲಿಲ್ಲ. ವೃಥಾ ನಿಂದೆ ಬಂದರೂ ಮೋಡ ಬಿಟ್ಟು ಹೋದ ಹಾಗೆಯೇ ಹೋಗಿಬಿಡುತ್ತದೆ. ಇದೂ ಕೂಡ ಒಂದು ಲಾಭಕ್ಕಾಗಿಯೇ ಅಂದುಕೊಂಡು ನೆಮ್ಮದಿಯಾಗಿರು" ಎಂಬ ಮಾತುಗಳು ಕೃಷ್ಣನ ಕಿವಿಗೆ ಬಿದ್ದುವು.

ಕೃಷ್ಣನು ಕಣ್ಣು ಬಿಡಿಸಿ "ನಿನ್ನ ಲೀಲೆ ವಿಘ್ನೇಶ್ವರಾ" ಎಂದು ಅಡ್ಡಬಿದ್ದನು.

ಅದೇ ಸಮಯದಲ್ಲಿ ರುಕ್ಮಿಣಿ ಆ ಪೂಜಾ ಮಂದಿರದೊಳಗೆ ಪ್ರವೇಶಿಸಿ, ವಿಘ್ನೇಶ್ವರನ ಮುಂದೆ ಧ್ಯಾನಿಸಿಕೊಂಡಿದ್ದ ಕೃಷ್ಣನನ್ನು ನೋಡಿ ಆಶ್ಚರ್ಯಪಡುತ್ತ, "ಇದೇನಿದು? ನನ್ನ ಶ್ರೀಯುವರು ವಿಘ್ನೇಶ್ವರ ಮಹಾಶಯರೊಂದಿಗೆ ಮಾತುಕತೆ ಆಡುವ ಹಾಗಿದೆಯಲ್ಲಾ? ಏನೋ ವಿಶೇಷ ಇರಬೇಕು!" ಎಂದಳು.

"ಮತ್ತೇನಿಲ್ಲ ರುಕ್ಮಿಣೀ, ಇದೇ ದಿನ, ಹಿಂದಿನ ಒಂದಾನೊಂದು ವಿನಾಯಕ ಚತುರ್ಥಿಯ ದಿನ, ನನ್ನನ್ನು ಪೋಷಿಸಿದ ತಾಯಿ ಯಶೋದಮ್ಮನೊಂದಿಗೆ ನಾನು ಹೇಳಿದ ಒಂದು ಮಾತು ನೆನಪಿಗೆ ಬಂತು. ಅಷ್ಟೇ!" ಎಂದನು ಕೃಷ್ಣ.

"ಆ ನಿನ್ನ ಮುದ್ದು ಮಾತು ಏನೂ ಅಂತ ನಾನು ಸ್ವಲ್ಪ ಕೇಳಬಾರದೇ ಪ್ರಿಯಾ?" ಎಂದಳು ಆಶೆಯಿಂದ ರುಕ್ಮಿಣಿ.

"ಕೇಳು ಬೇಕಾದರೆ. ಯಶೋದಮ್ಮ ಹಸುವನ್ನು ಹಿಂಡಿ ಹಾಕುತ್ತಿದ್ದ ಹಾಲಿನ ಪಾತ್ರದಲ್ಲಿ ನಾನು ಚೌತಿಯು ಚಂದ್ರಬಿಂಬವನ್ನು ನೋಡಿ ಕೇಕೇ ಹಾಕಿದೆ. 'ಅಯ್ಯೋ! ಎಷ್ಟು ನಿಂದೆಗಳು ನಿನ್ನ ಮೇಲೆ ಬೀಳುತ್ತದೋ ಕಂದಾ' ಅಂತ ಯಶೋದಮ್ಮ ತುಂಬಾ

ನೊಂದುಕೊಂಡಳು. 'ದೊಡ್ಡವನಾದ ಮೇಲೆ ಕೂಡಾ ಅಪನಿಂದೆ ಬಂದೀತು' ಅಂದಳು. ಅದಕ್ಕೆ ನಾನು ಹಾಗೆ ಮತ್ತೊಮ್ಮೆ ಚೌತೀ ಚಂದ್ರನನ್ನು ನೋಡಬೇಕಲ್ಲವೇ ಅಂತ ಕೇಳಿದೆ" ಎಂದು ಕೃಷ್ಣನು ನಿಲ್ಲಿಸಿದನು.

"ಹಾಗಾದರೆ ಆಗ ಬಂದ ಅಪನಿಂದೆ ಏನಾಯಿತು?" ಎಂದು ಕೇಳಿದಳು ರುಕ್ಮಿಣಿ.

"ಬಂತಲ್ಲಾ ನಿಂದೆ. ನಾನು ಮಣ್ಣು ತಿನ್ನುತ್ತೇನೆ ಅಂತ ಅಣ್ಣಯ್ಯ ಸುಳ್ಳು ಸುಳ್ಳೇ ದೂರು ಹೇಳಿಯೇ ಬಿಟ್ಟ" ಎಂದನು ಕೃಷ್ಣ.

"ಅಲ್ಲಿಗೇ ಹೋಯಿತು ಅನ್ನು. ಮತ್ತೆ ಈಗ ಏನಾಯಿತು? ಚಂದ್ರನನ್ನು ನೋಡಲಿಲ್ಲವಷ್ಟೇ? ಒಳ್ಳೇ ಕಾಲ, ನೋಡಬೇಕೆಂದರೂ ಕಾಣಸದು. ಆಕಾಶ ತುಂಬಾ ಮೋಡ ಕವಿದಿದೆ" ಎಂದು ಮತ್ತೇನೋ ಹೇಳಬೇಕೆಂದು ಅತ್ತಿತ್ತ ನೋಡಿದಳು.

"ಏಕೆ ಸುಮ್ಮನಾದೆ ರುಕ್ಮಿಣೀ? ಏನೋ ಹೇಳಲು ಬಂದೆ. ಏನು ವಿಶೇಷ?" ಎಂದು ಆತುರದಿಂದ ಕೇಳಿದನು ಕೃಷ್ಣ.

"ಬಲು ದೊಡ್ಡ ವಿಶೇಷ ಗೊತ್ತಾ? ಆ ಸತ್ರಾಜಿತು ಮಹಾರಾಜರ ಮನೆಯೊಳಗಿನ ಮಣಿ ನಮ್ಮ ಮನೆಗೆ ಬಂದುಬಿಟ್ಟಿತು!" ಎಂದಳು ರುಕ್ಮಿಣಿ.

"ಶಮಂತಕ ಮಣಿ ನಮ್ಮ ಮನೆಗೆ ಬರುವುದೆಂದರೇನು? ನಾನೆಂದೂ ನಂಬಲಾರೆ! ಅದನ್ನು ಹೇಗೆ ಬರಲು ಬಿಟ್ಟಾನು ಸ್ವಾರ್ಥಿಯಾದ ಆ ಸತ್ರಾಜಿತು?" ಎಂದು ಆಶ್ಚರ್ಯದಿಂದ ಕೇಳಿದನು ಕೃಷ್ಣ.

"ಆ ಮಣಿಯಲ್ಲ; ಸತ್ರಾಜಿತು ಅವರ ಕನ್ಯಾಮಣಿ, ಸುಂದರೀಮಣಿ, ಸತ್ಯಭಾಮಾಮಣಿ ಬಂದಿದ್ದಳು. ಬಹಳ ಹೊತ್ತಿನವರೆಗೆ ನಾವಿಬ್ಬರೂ ಮಾತಾಡಿಕೊಂಡಿದ್ದೆವು. ಮಾತಾಡುವಾಗೆಲ್ಲಾ ಆಚೆ ಈಚೆ ನೋಡಿ ನೋಡಿ ಹುಡುಕಿದಳು ಪಾಪ! ಈಗಲೇ ಕಳುಹಿಸಿಕೊಟ್ಟು ಹೀಗೆ ಬಂದೆ. ನೀನು ಇಲ್ಲಿ ಹುದುಗಿದ್ದೀ ಕಳ್ಳನ ಹಾಗೆ!" ಎಂದಳು ರುಕ್ಮಿಣಿ.

ಕೃಷ್ಣನು ತಲೆಯಾಡಿಸುತ್ತ "ಚತುರ್ಥಿಯಲ್ಲವೇ? ನಮ್ಮ ಮನೆಯ ವಿಘ್ನೇಶ್ವರನನ್ನು ನೋಡಲು ಬಂದಿರಬೇಕು. ನೀನು ಪೂಜಿಸಿದ ವಿಘ್ನೇಶ್ವರನನ್ನು ನೋಡಿದಳಷ್ಟೇ?" ಎಂದನು ಕೃಷ್ಣ.

"ನೋಡಿದಳು ಪಾಪ! ವಿಘ್ನೇಶ್ವರನನ್ನು ನೋಡಬೇಕೆಂದು ಬಂದಳೋ ನಿನ್ನ ಕಣ್ಣಿಗೆ ಬೀಳಬೇಕೆಂದು ಬಂದಳೋ? ಅವಳ ಕಣ್ಣುಗಳು ನಿನ್ನನ್ನು ಹುಡುಕುವ ಹಾಗೆ ವಿಘ್ನೇಶ್ವರನನ್ನು ನೋಡಲೇ ಇಲ್ಲ!" ಎಂದು ರುಕ್ಮಿಣಿ ನಕ್ಕಳು.

"ಇದೆಂಥ ವಿಚಿತ್ರ! ಸರಿಯಾಗಿ ಮಾತಾಡಲು ಬಾರದೆಂದುಕೊಂಡ ರುಕ್ಮಿಣೀದೇವಿ ಈ ದಿನ ಇಷ್ಟೊಂದು ಚಾತುರ್ಯವಾಗಿ ಮಾತಾಡುವಳಲ್ಲ.!" ಎಂದು ಕೃಷ್ಣನು ರುಕ್ಮಿಣಿಯ ಮುಖ ನೋಡಿದನು.





# ಗಂಧರ್ವೇಂದ್ರನ ಮಗಳು

೪

ತನ್ನ ಪ್ರೀತಿಯ ಅಕ್ಕ ಮಾಡಕೂಡದೆಂದು ಹೇಳಿದ ಕೆಲಸವನ್ನು ಮಾಡಿ ಬೈಗುಳು ತಿನ್ನುವೆನೆಂದು ಹಸನ್ ಹೆದರಿಕೊಂಡಿದ್ದನು. ಆದರೆ ಅವಳು ಅಂತಹ ಯಾವುದನ್ನೂ ಕೇಳದೆ, ಅವನ ಸ್ಥಿತಿಗೆ ದಯಾರ್ದ್ರಳಾಗಿ, "ಆಗಿ ಹೋದುದಕ್ಕೆ ಕೊರಗ ಬಾರದಪ್ಪ. ನಿನ್ನ ಮನಸ್ಸನ್ನು ಎಳೆದುಕೊಂಡ ಆ ಕನ್ಯೆ ನಿನಗೆ ಸಿಗುವ ಹಾಗೆ ನನ್ನ ಕೈಲಾದಷ್ಟೂ ಪ್ರಯತ್ನಿಸುತ್ತೇನೆ. ಅಧೈರ್ಯ ಪಡಬೇಡ. ಆದರೆ ನಿನ್ನ ಈ ರಹಸ್ಯವು ನನ್ನ ಉಳಿದ ಅಕ್ಕಂದಿರಾರಿಗೂ ತಿಳಿಯುವ ಹಾಗೆ ಮಾತ್ರ ಮಾಡಬೇಡ. ತೆರೆಯಬಾರದ ಆ ಕೋಣೆಯ ಪ್ರಸ್ತಾಪ ಬಂದಗಿಂದರೆ ಅದು ಎಲ್ಲಿದೆಯೆಂದು ಕೂಡಾ ಗೊತ್ತಿಲ್ಲವೆಂದು ಹೇಳಿಬಿಡು. ಏಕೆ ಹೀಗೆ ಸೊರಗಿಹೋದೆಯೆಂದು ಅಕ್ಕಂದಿರು ಪ್ರಶ್ನೆಮಾಡಿದರೆ, ನಿಮ್ಮನ್ನೆಲ್ಲಾ ಬಿಟ್ಟು ಒಬ್ಬನೇ ಇದ್ದುದರಿಂದ ಹೀಗಾದೆನು ಅನ್ನು" ಎಂದು ಸಮಾಧಾನವನ್ನು ಹೇಳಿ ಶಾಂತಪಡಿಸಿದಳು.

ಆಮೇಲೆ ಸಣ್ಣವಳು ತನ್ನ ಅಕ್ಕಂದಿರ ಬಳಿಗೆ ಹೋಗಿ, "ಪಾಪ, ನಮ್ಮ ಹೊಸ ತಮ್ಮ ಹಸನ್ ಒಬ್ಬಂಟಿಯಾಗಿದ್ದು ನಮಗಾಗಿ ಚಿಂತಿಸುತ್ತ ಹಾಸಿಗೆ ಹಿಡಿದಿದ್ದಾನೆ. ಅವನಿಗೆ ತನ್ನ ಊರಿನದೂ, ತಾಯಿಯದೂ, ಬಂಧು ಮಿತ್ರರದೂ, ಜ್ಞಾಪಕ ಬಂದು ತಾಳಲಾಗದಷ್ಟು ಚಿಂತೆ, ಪಾಪ ! ಸೊರಗಿ ಕಡ್ಡಿಯ ಹಾಗೆ ಆಗಿಬಿಟ್ಟ?" ಎಂದಳು.

ಇದನ್ನು ಕೇಳಿ ಆ ರಾಜಕುಮಾರಿಯರು ಬಹಳವಾಗಿ ನೊಂದುಕೊಂಡು, ಅವನ ಬಳಿಗೆ ಹೋಗಿ ಬಗೆಬಗೆಯ ಉಪಚಾರಗಳನ್ನು ಮಾಡಿದರು. ಹಸನ್ ಸ್ವಲ್ಪ ಮಟ್ಟಿಗೆ ಚೆನ್ನಾಗುತ್ತ ಬಂದನು.

ಹೀಗಿರಲು ಒಮ್ಮೆ ರಾಜಕುಮಾರಿಯರೆಲ್ಲಾ ಬೇಟೆಗೆ ಹೊರಟರು. ಕೊನೆಯವಳು ಮಾತ್ರ ಹಸನ್ನನಿಗೆ ಜತೆಯಾಗಿ ಇರುವೆನೆಂದು ಅಲ್ಲೇ ಉಳಿದಳು. ಉಳಿದವರೆಲ್ಲ ಹೋದ ಮೇಲೆ ಅವಳು ಹಸನ್ನನ್ನು ತೆರೆಯಬಾರದ ಕೋಣೆಯೊಳಗಿಂದಾಗಿ ಮಾಳಿಗೆಯ ಮೇಲಿನ ಉದ್ಯಾನದ ಸರೋವರದ ಹತ್ತಿರ ಕರೆದುಕೊಂಡು ಹೋಗಿ, "ನೋಡಪ್ಪಾ ಹಸನ್, ಈ ಸರೋವರದ ತೀರದಲ್ಲಿ ಅನೇಕ ಸ್ನಾನ ಘಟ್ಟಗಳಿವೆ. ನಿನ್ನನ್ನು ಆಕರ್ಷಿಸಿದ ಕನ್ಯೆಯ ಗುಂಪಿನವರು ಎಲ್ಲಿ




ಯನ್ನು ಕೈವಶಪಡಿಸಿಕೊಂಡರೆ ಹೊರತು, ಅವಳು ನಿನಗೆ ಸಿಗುವ ದಾರಿ ಬೇರೊಂದಿಲ್ಲ. ಆದ್ದರಿಂದ ಅವಳು ಇನ್ನೊಂದು ಸಾರಿ ಬರುವವರೆಗೆ ಇಲ್ಲಿಯೇ ಹೊಂಚಿಕೊಂಡಿದ್ದು, ಅವಳು ಗೆಳತಿಯರೊಂದಿಗೆ ಸರೋವರದಲ್ಲಿ ಜಲಕ್ರೀಡೆಯಾಡುವ ಸಂಭ್ರಮ ದಲ್ಲಿರುವಾಗ, ಅವಳ ತೊಡುಗೆಯನ್ನು ಕದ್ದುಕೊಂಡು ಬಿಡು. ಅವಳು ಅದನ್ನು ಕೊಡುವಂತೆ ಎಷ್ಟೇ ದೀನ ಳಾಗಿ ಅತ್ತುಕೂಗಿ ಪ್ರಾರ್ಥಿಸಿದರೂ ನೀನು ಚಲಿಸ ಬಾರದು. ಸ್ವಲ್ಪ ಮಾತ್ರ ಚಲಿಸಿ ನೀನು ಅವಳಿಗೆ ಆ ತೊಡುಗೆಯನ್ನು ಕೊಟ್ಟರೆ ತೀರಿತು. ನಿನ್ನೊಂದಿಗೆ ನಾವೂ, ನಮ್ಮ ತಂದೆಯೂ ಎಲ್ಲರೂ ಸರ್ವ ನಾಶ ವಾಗಿ ಹೋಗುವುದು ಖಂಡಿತ. ನೀನು ಗುಂಡಿಗೆ ಯನ್ನು ಕಲ್ಲು ಮಾಡಿಕೊಂಡು, ಅವಳ ಜುಟ್ಟು ಹಿಡಿದುಕೊಂಡು ದರದರನೆ ಎಳೆದುಕೊಂಡು ಬರುವುದೇ ಉತ್ತಮವಾದ ಕೆಲಸ, ಹಾಗೆ ಮಾಡಿದರೆ ಅವಳು ನಿನಗೆ ಬಾಗಿ ಹೋಗುತ್ತಾಳೆ. ಹಾಗೆ ನೀನು ಅವಳ ಗಂಡನಾಗುವುದು ಖಂಡಿತ. ಆ ಮೇಲೆ ಏನಾಗುವುದೋ ನೋಡೋಣ." ಎಂದು ಅವನಿಗೆ ಹೇಳಿಕೊಟ್ಟಳು. ಅವಳ ಮಾತುಗಳನ್ನು ಕೇಳುತ್ತಾ ಹಸನ್ ಆನಂದದಿಂದ ತನ್ಮಯನಾದನು.

ಸ್ನಾನ ಮಾಡಿದರು ?" ಎಂದು ಕೇಳಿದಳು, ಹಸನ್ ಅವಳಿಗೆ ಸಿಂಹಾಸನವಿರುವ ಸ್ನಾನದ ಘಟ್ಟವನ್ನು ತೋರಿಸಿದನು.

ಅದನ್ನು ನೋಡಿ ಅವಳು ಮುಖಿಕಂದಿದವಳಾಗಿ, "ಅರೇ ಭಗವಂತನೇ! ನೀನು ನೋಡಿದ ಕನ್ಯೆ ಗಂಧರ್ವಚಕ್ರವರ್ತಿಯ ಮಗಳಪ್ಪಾ. ಅವಳು ಅವಳ ಗೆಳತಿಯರೊಂದಿಗೆ ಬಂದಿದ್ದಾಳೆ. ಆ ಚಕ್ರವರ್ತಿಯ ಕೆಳಗೆ ನಮ್ಮ ತಂದೆ ಒಬ್ಬ ಸಣ್ಣ ಸಾಮಂತಮಾತ್ರವೇ. ನೀನು ಪ್ರೇಮಿಸಿದ್ದು ಚಕ್ರವರ್ತಿಯ ಕುಡೇ ಮಗಳಾಗಿರ ಬೇಕು. ಗಂಧರ್ವಚಕ್ರವರ್ತಿಯ ಲೋಕಕ್ಕೆ ಮಾನ ವರು ಮಾತ್ರವಲ್ಲ, ಇತರ ಗಂಧರ್ವರು ಕೂಡಾ ಹೋಗಲು ಸಾಧ್ಯವಿಲ್ಲ. ನೀನು ನೋಡಿದ ಗಂಧರ್ವ ಚಕ್ರವರ್ತಿಯ ಮಗಳು ಪ್ರತೀ ಅಮಾವಾಸ್ಯೆಯ ದಿನ ತನ್ನ ಗೆಳತಿಯರೊಂದಿಗೆ ಇಲ್ಲಿಗೆ ಹಾರಿಬಂದು, ಜಳಕ ವಾಡಿ, ಮತ್ತೆ ಪಕ್ಷಿ ತೊಡುಗೆ ತೊಟ್ಟು ಹಾರಿ ಹೋಗುವುದು ವಾಡಿಕೆ. ಅವಳ ಪಕ್ಷಿ ತೊಡುಗೆ

ಮಾರಣೆಯದಿನವೇ ಅಮಾವಾಸ್ಯೆ. ಕತ್ತಲೆಯಾದ ಕೂಡಲೇ ಹಸನ್ ಮೇಲ್ಮಾಳಿಗೆಯ ಸರೋವರದ ಬಳಿಗೆ ಹೋಗಿ, ಮೆಟ್ಟಲಿನ ಸಮೀಪದಲ್ಲಿ ಹಾರಿ ಬರುವ ಸುಂದರಿಯರ ದಾರೀ ಕಾಯುತ್ತಾ ಅಡಗಿ ಕುಳಿತನು. ಸ್ವಲ್ಪ ಹೊತ್ತಾದ ಮೇಲೆ ಚಕ್ರವರ್ತಿಯ ಮಗಳೂ, ಅವಳ ಸಖಿಯರೂ, ಪಕ್ಷಿಗಳಂತೆ ಹಾರಿ ಕೊಂಡು ಬಂದರು. ಸರೋವರದ ತೀರದಲ್ಲಿ ಎರಗಿ ತಮ್ಮ ಪಕ್ಷಿ ತೊಡುಗೆಗಳನ್ನು ಕಳಚಿ, ಉಡುಗೆಗಳನ್ನು ತೆಗೆದು ತೀರದಲ್ಲಿಟ್ಟು ನೀರಿಗೆ ಇಳಿದರು. ಹಸನ್ ದಡದಡಿಸುವ ಗುಂಡಿಗೆಯಿಂದ ಆ ಉಡುಗೆ ತೊಡುಗೆ ಗಳ ಸಮೀಪಕ್ಕೆ ಬೆಕ್ಕಿನ ಹಾಗೆ ಹೋಗಿ, ತನ್ನ



ಪ್ರಿಯಳ ಪಕ್ಷಿ ತೊಡುಗೆಯನ್ನು ಎತ್ತಿಕೊಂಡು ಮತ್ತೆ ಸಪ್ಪಳಿಲ್ಲದೆ ಹಿಂದಿರುಗಿ ಅಡಗಿ ಕುಳಿತನು.

ಸ್ವಲ್ಪ ಹೊತ್ತಿನ ಮೇಲೆ ಚಕ್ರವರ್ತಿಯ ಮಗಳು ಸರೋವರದಿಂದ ಮೇಲೆ ಬಂದು, ತನ್ನ ಪಕ್ಷಿತೊಡುಗೆ ಕಾಣದಿರುವುದನ್ನು ಗಮನಿಸಿ, ಚೀತ್ಕಾರಮಾಡಲು ತೊಡಗಿದಳು. ಆ ಕೂಗನ್ನು ಕೇಳಿ ಅವಳ ಗೆಳತಿಯರು ನೀರಿನಿಂದ ಮೇಲೆ ಬಂದು, ನಡೆದ ಸಮಾಚಾರ ತಿಳಿದುಕೊಂಡರು. ತಿಳಿದ ಕೂಡಲೇ ಅವರು ತಮ್ಮ ಒಡತಿಯ ಆಪತ್ತಿಗೆ ಸಹಾಯ ಮಾಡುವುದಕ್ಕೆ ಬದಲಾಗಿ, ತಮಗೆ ತಾವೇ ಹೆದರಿಕೊಂಡು ಅವರವರ ಉಡುಪುಗಳನ್ನು ಅವಸರವಸರವಾಗಿ ಸಂಗ್ರಹಿಸಿ ಕೊಂಡು ರಿವ್ವರಿವ್ವನೆ ಆಕಾಶಕ್ಕೆ ಹಾರಿ ಹೋಗಿಯೇ ಬಿಟ್ಟರು. ಅವರಲ್ಲಿ ಯಾವಳೂ ಅವಳಿಗೆ ಯಾವ ಮಾತೂ ಹೇಳಲಿಲ್ಲ. ಅವರೆಂಥ ಗೆಳತಿಯರೋ!

ಅನಾಥಳಾಗಿ ದಿಕ್ಕೆಟ್ಟು ನಿಂತ ಚಕ್ರವರ್ತಿಯ ಮಗಳ ಬಳಿಗೆ ಹಸನ್ ಎದ್ದು ಬಂದನು. ಅವನನ್ನು ನೋಡಿದ ಕೂಡಲೇ ಅವಳು ಸರೋವರದ ತೀರ ದಲ್ಲಿ ಓಡಲು ತೊಡಗಿದಳು. ಹಸನ್ ಬೆಂಬತ್ತಿ ಓಡಿ ಅವಳ ತಲೆಗೂದಲನ್ನು ಹಿಡಿದನು. ಹಿಡಿದ ಜುಟ್ಟನ್ನು ಬಿಡದೆ ಕೈಗೆ ಸುತ್ತಿಕೊಂಡು ಎಳೆದಾಗ ಅವಳು ಅವನ ಹಿಂದೆ ನಡೆಯಲೇಬೇಕಾಯಿತು. ಅವಳು ಕಣ್ಣು ಮುಚ್ಚಿಕೊಂಡು, ಒಂದಿಷ್ಟೂ ಎಳೆದಾಟ ತೋರಿಸದೆ ಅವನು ಹೋದ ಹಾಗೆಯೇ ನಡೆಯುತ್ತ ಬಂದಳು. ಆದರೆ ಕಣ್ಣೀರುಗರೆಯುತ್ತಾ, ಸಣ್ಣ ದನಿ ಯಿಂದ ಅಳುವ ರಾಗ ಹೊರಡಿಸಿಕೊಂಡಿದ್ದಳು. ಹಸನ್ ಎದೆಯನ್ನು ಕಲ್ಲು ಮಾಡಿಕೊಂಡು, ಅದಾವು ದನ್ನೂ ಲಕ್ಷ್ಯ ಮಾಡದೆ ಅವಳನ್ನು ತನ್ನ ಕೋಣೆಗೆ ತಂದು ಒಳಗೆ ಕೂಡಿಸಿ, ಬಾಗಿಲಿಗೆ ಬೀಗ ಹಾಕಿ, ಬೇಗ ಬೇಗನೇ ಹೋಗಿ, ಉತ್ಸಾಹದಿಂದ ಈ ಸವಿಯಾದ ವಿಜಯದ ಸಮಾಚಾರವನ್ನು ತನ್ನ ಸಣ್ಣಕ್ಕನೊಂದಿಗೆ ಹೇಳಿದನು.

ಗಂಧರ್ವ ಚಕ್ರವರ್ತಿಯ ಮಗಳು ತನ್ನ ಕೋಣೆ ಯಲ್ಲಿರುವಳೆಂದು ಹಸನ್ ಹೇಳಿದ ಕೂಡಲೇ, ಅವನ ಅಕ್ಕ, ಬೇಗ ಬೇಗನೇ ಹೋಗಿ, ಅವಳ ಪಾದ ಹಿಡಿದು ನಮಸ್ಕಾರಮಾಡಿ, "ಮಹಾರಾಣೀ! ನಿನ್ನ ಆಗಮನ ದಿಂದ ನಮ್ಮ ಭವನವು ಪಾವನವಾಯಿತು" ಎಂದಳು. ದುಃಖ ಸಮುದ್ರದಲ್ಲಿ ಮುಳುಗಿದ್ದ ಚಕ್ರವರ್ತಿಯ ಕುಮಾರಿ, ಮುಖವೆತ್ತಿ ಅವಳನ್ನು ನೋಡಿ, "ನೀನೇನಾ? ಯಾವನೋ ಒಬ್ಬ ಮಾನವನು ನಿನ್ನ ಪ್ರಭುವಿನ ಮಗಳಿಗೆ ಹೀಗೆ ಅವಮಾನ ಮಾಡುವುದು ನಿನ್ನ ಪ್ರೇರಣೆಯಿಂದಲೇನಾ? ಅಸಲು ಇಂಥ ಮಾನವ ಮಾತ್ರನನ್ನು ನಿನ್ನ ಮನೆಯೊಳಗೆ ಹೇಗೆ ಸೇರಿಸಿ ಕೊಂಡೆ? ಏನಿದು ನಿನ್ನ ಧೈರ್ಯ! ನಿನ್ನ ಸಹಕಾರ ವಿಲ್ಲದೆ ಇವನು ಆ ಸರೋವರದ ಹತ್ತಿರ ಅಡಗಿದ್ದು ನನ್ನನ್ನು ಹಿಡಿದಿರಲು ಸಾಧ್ಯವೇ? ಏಕೆ ಇಂತಹ ದುಷ್ಕಾರ್ಯ ಮಾಡಿಸಿದೆ?" ಎಂದಳು ಕೋಪದಿಂದ.



ಆ ಮಾತಿಗೆ ಹಸನ್ನನ ಅಕ್ಕ "ದೇವೀ! ಈ ಯುವಕನು ಮನುಷ್ಯನಾದರೂ ಸಾಮಾನ್ಯ ಮನುಷ್ಯ ಅಲ್ಲ. ಇವನಿಗೆ ಸಮಾನರಾದ ಮನುಷ್ಯರು ಯಾರೂ ಇರಲಾರರು. ಇವನ ಗುಣಶೀಲಗಳೂ ಅತೀ ಉತ್ತಮವಾದುವು. ಇವನ ಮನಸ್ಸಿನಲ್ಲಿ ದುರಾಶೆಯೋ ದುರುದ್ದೇಶವೋ ಲವಲೇಶವೂ ಇಲ್ಲ. ಅಪ್ಪಟ ಬಂಗಾರದಂತಹ ಇವನು ವಿಧಿ ಪ್ರೇರಣೆಯಿಂದಲೇ ನಿನ್ನನ್ನು ಇಷ್ಟೊಂದು ಗಾಢವಾಗಿ ಪ್ರೇಮಿಸುವಂತಾಯಿತು. ದೈವ ನಿರ್ಣಯವನ್ನು ಯಾರು ತಾನೇ ಮೀರಬಲ್ಲರು? ಪ್ರೇಮದಲ್ಲಿರುವವರು ಕ್ಷಮಾರ್ಹರು ದೇವೀ. ಅವನು ನಿನ್ನನ್ನು ಮೊದಲನೇ ಸಾರಿ ನೋಡಿದ ಮೇಲೆ ಪ್ರೇಮದ ಪೆಟ್ಟಿನಿಂದ ಪ್ರಾಣ ಬಿಡುವ ದೆಶೆಗೆ ಬಂದನು. ಹೇಗಿದ್ದವನು ಹೇಗಾಗಿರುವನು ನೋಡು! ನಿನ್ನೊಂದಿಗೆ ಸಾಟಿಯಿಲ್ಲದ ಸುಂದರಿಯರು ಬೇರೆ ಒಂಬತ್ತು ಮಂದಿ ಇದ್ದರೂ, ಇವನ ಮನಸ್ಸನ್ನು ನೀನು ಮಾತ್ರವೇ ಆಕರ್ಷಿಸಿದವಳು. ಇಂಥವನ ಮೇಲೆ ಕೋಪಿಸುವುದು ಮಹಾ ಪಾಪ ದೇವೀ!" ಎಂದಳು.

ಅವಳ ಮಾತುಗಳನ್ನು ಕೇಳಿದ ಮೇಲೆ ಇನ್ನು ತನಗೆ ವಿಮೋಚನೆ ಇಲ್ಲವೆಂದು ತಿಳಿದು ಚಕ್ರವರ್ತಿಯ ಮಗಳು ನಿಡುಸುಯಿಲುಗರೆದಳು.

ಹಸನ್ನನ ಅಕ್ಕ ಅವಳಿಗೆ ಒಳ್ಳೊಳ್ಳೆಯ ಭೂಷಣಗಳನ್ನು ಕೊಟ್ಟು, ಭೋಜನವನ್ನು ಬಡಿಸಿ, ಅವಳ ಚಿಂತೆಯನ್ನು ತಗ್ಗಿಸಲು ಮಾಡಬೇಕಾದ ಪ್ರಯತ್ನಗಳನ್ನೂ ಮಾಡಿದಳು. ಕಡೆಗೆ ಚಕ್ರವರ್ತಿಯ ಮಗಳು, "ನನಗೆ ನನ್ನ ತಂದೆಯಿಂದ, ನನ್ನ ಜನ್ಮಸ್ಥಳದಿಂದ ದೊಡ್ಡ ವಿಯೋಗವನ್ನೇ ಬರೆದಿದ್ದಾನೆ ವಿಧಿ! ಈ ವಿಧಿ ನಿಯಮವನ್ನು ಹೇಗೆ ತಪ್ಪಿಸಿಕೊಳ್ಳಲಿ? ಸಾಧ್ಯವಿಲ್ಲದ ಮಾತು! ಇನ್ನು ನನ್ನವರನ್ನು ಮರೆಯಲೇಬೇಕಾಯಿತು." ಎಂದು ತಾನೇ ಹೇಳಿಕೊಂಡಳು.

ಹೀಗೆ ಆ ಸಣ್ಣಕ್ಕ ತಮ್ಮ ಚಕ್ರವರ್ತಿಯ ಕುಮಾರಿಗೆ ಸ್ವಲ್ಪ ಮಟ್ಟಿಗೆ ಉಪಶಮನವಾಗುವಂತೆ ಮಾಡಿ, ಹಸನ್ನನ ಬಳಿಗೆ ಬಂದು, "ಇನ್ನು ನೀನು ಪ್ರಯತ್ನಪಟ್ಟು ನಿನ್ನ ಪ್ರಿಯಳ ಮನಸ್ಸನ್ನು ನಿನ್ನ ಕಡೆಗೆ ತಿರುಗಿಸಿಕೋ. ನಾನು ಸ್ವಲ್ಪ ಆ ಕಡೆಗೆ ಹೋಗಿ ಬರುತ್ತೇನೆ. ಅವಳಿಗೆ ಎಲ್ಲಾ ಮರ್ಯಾದೆಗಳನ್ನೂ ತೋರಿಸು. ಅವಳೊಂದಿಗೆ ಮಾತಾಡುವಾಗ ತುಂಬಾ ಸೌಜನ್ಯತೆಯನ್ನು ವಹಿಸು. ದುಡುಕಬೇಡ" ಎಂದು ಎಚ್ಚರಿಸಿ, ಎಲ್ಲಿಗೋ ಹೋದಳು.

ಹಸನ್ ಚಕ್ರವರ್ತಿಯ ಮಗಳ ಬಳಿಗೆ ಬಂದು ನಿಂತ ಕೂಡಲೇ, ಅವಳು ಅವನನ್ನು ಆಪಾದ ಮಸ್ತಕ ಪರ್ಯಂತ ಪರಿಶೀಲಿಸಿ, ಅವನ ಅಪೂರ್ವ ಸೌಂದರ್ಯವನ್ನು ಗಮನಿಸಿ, ಸ್ವಲ್ಪ ಮಟ್ಟಿಗೆ ಮೆತ್ತಗಾದಳು. ಆಗ ಹಸನ್ ಅವಳೊಂದಿಗೆ, "ರಾಜಕುಮಾರೀ, ನಾನು ನಿನ್ನನ್ನು ತಂದ ಬಗೆಯನ್ನು ಮರೆತು ಮನ್ನಿಸು. ಯಾವ ವಿಧದಲ್ಲಿಯೂ ನಿನ್ನನ್ನು ಬಲಾತ್ಕಾರಿಸುವ ಉದ್ದೇಶ ನನ್ನ ಮನಸ್ಸಿನಲ್ಲಿಲ್ಲ.

ನಿನ್ನ ದುಃಖನೋಡಿ ನನಗಾದ ನೋವು ಅಷ್ಟಿಷ್ಟಲ್ಲ. ಶಾಸ್ತ್ರವಿಧಿಯನ್ನು ಅನುಸರಿಸಿ ವಿಧಿಪ್ರಕಾರ ನಿನ್ನನ್ನು ಮದುವೆಯಾಗ ಬೇಕೆಂಬುದೇ ನನ್ನ ಆಸೆ. ಮದುವೆ ಯಾದ ಮೇಲೆ ನಾವು ನಮ್ಮ ಜನ್ಮಸ್ಥಳವಾದ ಬಾಗ್ದಾದುನಗರಕ್ಕೆ ಹೋಗೋಣ. ನನ್ನನ್ನು ನಿನ್ನ ಗುಲಾಮನೆಂದೇ ತಿಳಿ. ನಿನಗೆ ಬೇಕಾದಷ್ಟು ಮಂದಿ ದಾಸದಾಸಿಯರನ್ನು ಏರ್ಪಾಡುಮಾಡುತ್ತೇನೆ. ಅಲ್ಲಿ ನನ್ನ ತಾಯಿ ಇದ್ದಾಳೆ. ಅವಳಷ್ಟು ಒಳ್ಳೆಯವಳು ಪ್ರಪಂಚದಲ್ಲಿ ಯಾರೂ ಇಲ್ಲವೆಂದು ನಿನಗೇ ತಿಳಿ ಯುತ್ತದೆ. ಅವಳು ನಿನ್ನನ್ನು ಮಗಳ ಹಾಗೇ ನೋಡಿ ಕೊಳ್ಳುತ್ತಾಳೆ. ಅವಳ ಅಡಿಗೆಯ ರುಚಿ ಹೇಳಲಾಸಲ್ಲ. ಆ ಊಟದ ರುಚಿ ನೋಡಿದರೆ, ನೆನಸಿದಾಗ ಜೊಲ್ಲು ಒಸರೀತು " ಎಂದನು.

ಚಕ್ರವರ್ತಿಯ ಮಗಳು ಏನೂ ಉತ್ತರ ಕೊಡದೆ ಅವನು ಹೇಳುವುದನ್ನು ಕೇಳುತ್ತಿದ್ದಂತೆ, ಹೊರಗಿನ ಹೆಬ್ಬಾಗಿಲು ತಟ್ಟುವ ಶಬ್ದವಾಯಿತು. ಹಸನ್ ಓಡಿ ಹೋಗಿ ಬಾಗಿಲು ತೆರೆದನು.

ಬಂದವರು ಬೇರೆ ಯಾರೂ ಅಲ್ಲ; ದೊಡ್ಡ ಅಕ್ಕಂದಿರು ಆರು ಮಂದಿಯೂ ಬೇಟೆಯಿಂದ ತಿರುಗಿ ಬಂದಿದ್ದರು. ನೋಡಿದ ಕೂಡಲೇ ಹಸನ್ನನಲ್ಲಿ ಉಂಟಾಗಿರುವ ಬದಲಾವಣೆಯನ್ನು ಗಮನಿಸಿದರು. ಹಸನ್ ಅವರೊಂದಿಗೆ ಚಕ್ರವರ್ತಿ ಕುಮಾರಿಯ ಸಂಗತಿಯನ್ನು ಹೇಳದೆ, ಅವರು ಹೊಡೆದು ತಂದ ಬೇಟೆಗಳನ್ನು ಒಳಗೆ ಸಾಗಿಸಿದನು.

ದೊಡ್ಡ ಅಕ್ಕ ಅವನನ್ನು ನೋಡಿ, "ಏನೋಯ್ ಹಸನ್? ಈ ದಿನ ಬಹಳ ಉತ್ಸಾಹದಲ್ಲಿರುವ ಹಾಗಿದೆ! ಕಾರಣವಿರಲೇ ಬೇಕು. ಏನದು ?" ಎಂದು ಕೇಳಿದಳು. ಹಸನ್ ನಾಚಿಕೊಂಡು, ಆಗಲೇ ಬಂದ ಸಣ್ಣಕ್ಕನ ಕಡೆಗೆ ನೋಡಿ, "ನೀನೇ ಹೇಳು" ಎಂಬಂತೆ ಸನ್ನೆ ಮಾಡಿದನು.

"ಮತ್ತೇನಿಲ್ಲ. ನಮ್ಮ ಹಸನ್ ಈ ದಿನ ಒಂದು ಹಕ್ಕಿಯನ್ನು ಹಿಡಿದಿದ್ದಾನೆ. ಅದನ್ನು ಪಳಗಿಸಬೇಕು" ಎಂದಳು ಸಣ್ಣಕ್ಕ.

"ಅಷ್ಟೊಂದಕ್ಕೆ ಇಷ್ಟೊಂದು ನಾಚುತ್ತಾನಲ್ಲಾ !" ಎಂದಳು ದೊಡ್ಡಕ್ಕ.

"ಅವನಿಗೆ ಆ ಹಕ್ಕೀ ಮೇಲೆ ಮಹಾ ಇದು! ಏನೆಂದು ಹೇಳಲಿ?" ಎಂದು ಸಣ್ಣಕ್ಕ ತನ್ನ ಅಕ್ಕಂದಿ ರೊಂದಿಗೆ ನಡೆದುದನ್ನೆಲ್ಲ ಹೇಳಿಬಿಟ್ಟಳು.

ಕೂಡಲೇ ಅವರೆಲ್ಲರೂ ಚಕ್ರವರ್ತಿಯ ಮಗಳಿರುವಲ್ಲಿಗೆ ಹೋಗಿ, ಅವಳಿಗೆ ನಮಸ್ಕಾರಮಾಡಿ, ಹಸನ್ನನ್ನು ಮದುವೆಯಾಗುವಂತೆ ಪ್ರೋತ್ಸಾಹ ಪಡಿಸಿದರು. ಅವರೇ ಹಸನ್ನನ ಕೈಯಲ್ಲಿ ಅವಳ ಕೈಯನ್ನಿಟ್ಟು, ಪಾಣಿಗ್ರಹಣ ಕೂಡಾ ಮಾಡಿಸಿ ಬಿಟ್ಟರು. —(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೨ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Kiran



Kiran

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಫೆಬ್ರುವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಡಿಸೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: ಕದ್ದದ್ದನ್ನು ಬಚ್ಚಿಟ್ಟುಕೊಂಡೇ ತಿನ್ನಬೇಕಷ್ಟೆ?

ಎರಡನೇ ಫೋಟೋ: ಸ್ವಂತದ್ದೇ ಆದರೆ ಅಂಥಾ ಭಯ ಇಲ್ಲಷ್ಟೆ?

ಕಳುಹಿಸಿದವರು: ಪಿ. ಶೋಭಾದೇವಿ,

೧೦೬, ಐ. ಟಿ. ಐ. ಕಾಲನಿ, ಬೆಂಗಳೂರು-೮೫

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

ಪ್ರವೇಶಧನವಿಲ್ಲ




**ಬಹುಮಾನ ಗಳಿಸಿರಿ.**

ಕ್ಯಾಮಲ್ — ಪ್ರಥಮ ಬಹುಮಾನ ರೂ. 15
ಕ್ಯಾಮಲ್ — ದ್ವಿತೀಯ ಬಹುಮಾನ ರೂ. 10
ಕ್ಯಾಮಲ್ — ತೃತೀಯ ಬಹುಮಾನ ರೂ. 5
ಕ್ಯಾಮಲ್ — 5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್ — 10 ಸರ್ಟಿಫಿಕೇಟ್‌ಗಳು

— ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿ. —

ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ

P.B. No. 9928, COLABA, Bombay-400 005.

ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ___________________________ Age ________________

Address ___________________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: 27—2—1982

Vision

**CONTEST NO.23**

ವಿರಾಮ ಭೋಜನ ಮಾಡಲು ಸಮಯ.
ಹೊಟ್ಟೆನೋವಿನಿಂದ ಕಷ್ಟಪಡುವುದಕ್ಕಲ್ಲ.

ರಾಮ ಮತ್ತು ಶ್ಯಾಮ

# ಬೆಳ್ಳಿ ಪಟ್ಟೆಗಳು






























ಪಾರ್ಲೆ ಪಾಪಿನ್ಸ್. ಅವನ್ನು ಬಾಯಿಯಲ್ಲಿ ಹಾಕಿಕೊಳ್ಳುವ ಮೊದಲು ಬೆಳ್ಳಿಯ ಪಟ್ಟೆಗಳಿವೆಯೊ ನೋಡಿಕೊಳ್ಳಿ.
ಈಗ ನಕಲಿಗಾರರು ನಿಮ್ಮನ್ನು ಮೋಸಗೊಳಿಸಲಾರರು.